ಚಾಲುಕ್ಯ : ಕಲ್ಯಾಣದ ಚಾಲುಕ್ಯ ದೊರೆಗಳಿಗೆ ಸಂಬಂಧಿಸಿದಂತೆ ಈ ತಾಲ್ಲೂಕಿನಲ್ಲಿ ದೊರೆತಿರುವ ಶಾಸನ ಒಂದೇ. ಇಮ್ಮಡಿತೈಲನ ಕಾಲದ್ದೆಂದು ಹೇಳಬಹುದಾದ ಕ್ರಿ.ಶ. ೯೯೩ರ ಸೋಮಸಮುದ್ರ ಶಾಸನವು (ಚಾನ ೪೦೪) ಅಮ್ಮಡಿಗಾವುಂಡ ಎಂಬ ವ್ಯಕ್ತಿ ಕೆರೆಯೊಂದನ್ನು ಕಟ್ಟಿಸಿದ ವಿಷಯವನ್ನು ನಿರೂಪಿಸುತ್ತದೆ. ಶಾಸನ ಉಲ್ಲೇಖಿಸುವ ಕಿರುವಸೂರು ಈಗಿನ ಸೋಮಸಮುದ್ರ. ಈಗ ಈ ಕೆರೆಯನ್ನು ಕಾಳಿಕೆರೆ ಎಂದು ಕರೆಯುತ್ತಾರೆ. ಕೆರೆಯನ್ನು ಕಟ್ಟಿಸಲು ಅಮ್ಮಡಿ ಗಾವುಂಡನಿಗೆ ಸೇರಿದ ಭೂಮಿಯ ಒಂದು ಭಾಗವನ್ನು ಕೊಂಡನೆಂದು ಈ ಶಾಸನವು ತಿಳಿಸುತ್ತದೆ.

**ಚೋಳ** : ಗಂಗರು ಪಾಲಿಸುತ್ತಿದ್ದ ಪ್ರದೇಶದಲ್ಲಿ ಕೆಲವು ಭಾಗ ಕಾಲಕ್ರಮೇಣ ಚೋಳರ ಆಧೀನವಾದುದು ತಿಳಿದ ಸಂಗತಿ. ಆದ್ದರಿಂದ ಈ ತಾಲ್ಲೂಕಿನಲ್ಲಿ ಸ್ವಾಭಾವಿಕವಾಗಿ ಚೋಳರ ಕೆಲವು ಶಾಸನಗಳು ದೊರೆತಿವೆ. ಕ್ರಿ.ಶ. ೯೯೧ ಕೆಂಪನಪುರ ಶಾಸನವು (ಚಾನ ೧೪೫) ಚೋಳ ರಾಜರಾಜನನ್ನು "ಚೋಳ ನಾರಾಯಣ" ಎಂದು ಕರೆದಿದೆ. ಈಶ್ವರಾನ್ವಯದ ಸೋಮರಾಶಿಭಟ್ಟಾರಕರಿಗೆ ಕೆಲ್ಲೂರಪೊಳೆಯ ಎಂಬಾತನು ಕಿರುಹೇರೂರು ಗ್ರಾಮದಲ್ಲಿ ಭೂಮಿಕಾಣಿಕೆಯನ್ನು ವಿದ್ಯಾದನವಾಗಿ ನೀಡಿದ ವಿಷಯ ಶಾಸನದ ವಸ್ತು. ಈ ಶಾಸನವು ಕನ್ನಡದಲ್ಲಿರುವ ಗಮನಿಸಬೇಕಾದ ಸಂಗತಿ. ಇದೇ ಅರಸನ ಹೊಂಗನೂರು ಶಾಸನವು (ಚಾನ ೧೬೭) ಕನ್ನಡಲಿಪಿ ಹಾಗೂ ತಮಿಳು ಭಾಷೆಯಲ್ಲಿ ರಚಿತವಾಗಿರುವುದೂ ಕುತೂಹಲಕರ. ಕಾಲದ ದೃಷ್ಟಿಯಿಂದ ಇದು ಕೆಂಪನಪುರ ಶಾಸನಕ್ಕಿಂತ ಈಚಿನದು. ತಮಿಳು ಭಾಷೆಯಲ್ಲಿ ರಚಿತವಾಗಿರುವುದೂ ಕುತೂಹಲಕರ. ಕಾಲದ ದೃಷ್ಟಿಯಿಂದ ಇದು ಕೆಂಪನಪುರ ಶಾಸನಕ್ಕಿಂತ ಈಚಿನದು. ತಮಿಳು ಭಾಷೆ ಮತ್ತು ಕನ್ನಡ ಲಿಪಿಯ ಮೂಲಕ ಚೋಳರು ಈ ಪ್ರದೇಶದಲ್ಲಿ ಬೇರೂರಿಸಲು ಮಾಡಿದ ಪ್ರಯತ್ನದ ಪ್ರಪ್ರಥಮ ಹಂತವನ್ನು ಇಲ್ಲಿ ಗುರುತಿಸಬಹುದು. ಒಂದನೆಯ ರಾಜೇಂದ್ರ ಚೋಳನ ಆಳ್ವಿಕೆಗೆ ಸೇರಿದ ಕಿರುಗೊರಲಾರ ಶಾಸನವು (ಚಾನ ೪೦೬) ವೀರನೊಬ್ಬ ತುರುಗಾಳಗವೊಂದರಲ್ಲಿ ಕಾದಿ ಮಡಿದ ಸಂಗತಿಯನ್ನು ದಾಖಲಿಸುವಂತೆ ತೋರುತ್ತದೆ. ಆದರೆ ವಿವರಗಳು ನಷ್ಟವಾಗಿವೆ. ಕ್ರಿ.ಶ. ೧೦೪೫-೫೦ಕ್ಕೆ ಸೇರಿದ ಮಂಗಲ ಶಾಸನವು (ಚಾನ ೧೩೭) ಒಂದನೆಯ ರಾಜಾದಿರಾಜನ ಪ್ರಶಸ್ತಿಯನ್ನು ಒಳಗೊಂಡಿದೆ. ಇದೇ ಗ್ರಾಮದ ಇನ್ನೊಂದು ಶಾಸನದಲ್ಲಿ (ಚಾನ ೧೩೫) ಈ ಪ್ರಶಸ್ತಿ ಇದ್ದರೂ ವಿವರಗಳು ಸವೆದು ಹೋಗಿವೆ.

ಕೆಂಪನಪುರ ಶಾಸನವು (ಚಾನ ೧೪೬) ಅಯ್ಯಾ ಪೊಳಿಲ್‌ನ ವಣಿಕ ಸಂಘವು ರಾಜಾಧಿರಾಜ ಚತುರ್ವೇದಿ ಮಂಗಲವೆಂದು ಹೆಸರಿದ್ದ ಮೇಲೂರನ್ನು ಎರವೀರಪಟ್ಟಣವನ್ನಾಗಿ ಪರಿವರ್ತಿಸಿದ ಸ್ವಾರಸ್ಯಕರ ಸಂಗತಿಗೊಂದನ್ನು ನಿರೂಪಿಸುತ್ತದೆ. ಊರಿಂದೂರಿಗೆ ವ್ಯಾಪಾರ ನಿಮಿತ್ತ ಪ್ರಯಾಣ ಮಾಡುವ ವಣಿಕ ಸಮುದಾಯಕ್ಕೆ ಇಲ್ಲಿ ಒದಗಿಸಬೇಕಾದ ಸಾಮಾನುಸರಂಜಾಮುಗಳ ವಿವರಗಳು ಈ ಶಾಸನದಲ್ಲಿವೆ. ಅಂಥ ವ್ಯಾಪಾರಿಗಳಲ್ಲಿ ದರ್ಜೆಗಳನ್ನು ಗುರುತಿಸಿ ಅದಕ್ಕನುಗುಣವಾಗಿ ಅವರಿಗೆ ಬಟ್ಟೆ ಹಂಚಬೇಕಾದುದುದನ್ನು ಶಾಸನದಲ್ಲಿ ತಿಳಿಸಿದೆ. ವಣಿಕರ ಅಂಗರಕ್ಷಕರಿಗೆ ಇಲ್ಲಿ ತಂಗಿದ್ದಾಗ ಒದಗಿಸಬೇಕಾದ ಸೌಲಭ್ಯಗಳು ಹಾಗೂ ಮೃತ ವೀರರ ಸ್ಮರಣಾರ್ಥ ಮಾಡಬೇಕಾದ ವ್ಯವಸ್ಥೆಗಳನ್ನು ಕುರಿತು ಈ ಶಾಸನ ಪ್ರಸ್ತಾಪಿಸುತ್ತದೆ. ಊರುಗಳನ್ನು ಎರೆವೀರಪಟ್ಟಣಗಳಾಗಿ ಪರಿವರ್ತಿಸುವ ಪದ್ಧತಿ ತಮಿಳುನಾಡಿನಲ್ಲಿತ್ತು ಈ ಪ್ರದೇಶದಲ್ಲಿಯೂ ಇದದ್ದುದಕ್ಕೆ ಪ್ರಸ್ತುತ ಶಾಸನ ಒಂದು ನಿದರ್ಶನ.

ಕ್ರಿ.ಶ. ೧೦೫೮-೫೯ರ ಹಳೇ ಆಲೂರು ಶಾಸನದಿಂದ (ಚಾನ ೧೮೬) ಇಮ್ಮಡಿ ರಾಜೇಂದ್ರ ಚೋಳನಿಗೆ "ರಾಜಕೇಸರಿ" ಎಂಬ ಬಿರುದಿತ್ತೆಂದು ತಿಳಿದು ಬರುತ್ತದೆ. ಒಂದನೆಯ ಕುಲೋತ್ತುಂಗನ ಕಾಲದ ಎಣ್ಣೆ ಗುಂಬ ಶಾಸನವು (ಚಾನ ೩೦೩) ಆ ಗ್ರಾಮದ ತಿರುವಿನ ರಾಮೀಶ್ವರಮುಡೈಯ ಮಹಾದೇವರಿಗೆ ಗಂಗೈಗೊಂಡಚೋಳವ-ನಾಡಾಳ್ವ ಮತ್ತು ಇತರರು ಭೂಮಿದಾನ ಮಾಡಿದ ವಿಷಯವನ್ನು ನಿರೂಪಿಸುತ್ತದೆ. ಇದರಲ್ಲಿ ಹಲವು ತೆರನ ತೆರಿಗೆಗಳ ಉಲ್ಲೇಖವಿದೆ.

**ಹೊಯ್ಸಳ:** ಕ್ರಿ.ಶ ೧೧೧೭ ರ ವೇಳೆಗೆ ಹೊಯ್ಸಳ ವಿಷ್ಣುವರ್ಧನನು ಗಂಗವಾಡಿಯಿಂದ ಚೋಳರನ್ನು ಹೊರದೂಡಿ ತನ್ನ ಆಳ್ವಿಕೆಯನ್ನು ಈ ಭಾಗದವರೆಗೆ ವಿಸ್ತರಿಸಿದುದು ಆತನ ಮಹಾಸಾಧನೆಗಳಲ್ಲೊಂದು ಆತನ ದಿಗ್ವಿಜಯಗಳಿಗೆ ಕಾರಣರಾದವರು ಹಲವು ನಿಷ್ಠ ದಂಡನಾಯಕರು. ಮಹಾ ಮಾತ್ರ ಕುಲದ ಪುಣಿಸಮಯ್ಯ ಅವರಲ್ಲೊಬ್ಬ; ಈತ ವಿಷ್ಣುವರ್ಧನನ ಸೇನಾಧಿಪತಿ ಹಾಗೂ ಸಂಧಿವಿಗ್ರಹಿಯಾಗಿದ್ದು. ಈತನ ವಂಶಾವಳಿ-ಯನ್ನು ಚಾಮರಾಜನಗರ ಶಾಸನದಲ್ಲಿ (ಚಾನ೩) ಕೊಟ್ಟಿದೆ. ಈತನ ಶೌರ್ಯದಿಂದಾಗಿ ತೊದವರು (ತೊಂಡರು) ಹೆದರಿದರು; ಕೊಂಗರು ತಲೆಮರೆಸಿಕೊಂಡರು; ಪೊಲುವರು ಹತರಾದರು' ಮಲೆಯಾಳರು ಮಡಿದರು ಹಾಗೂ ನೀಲಾದ್ರಿ ವಶವಾಯಿತು. ಈತ ಕೇಳಾಧಿಪತಿಯಾದ ತನ್ನ ಸ್ವಾಮಿಭಕ್ತಿಯ ದ್ಯೋತಕವಾಗಿ ಈತ ತನ್ನ ಮಗನಿಗೆ ಅರಸನ ಹೆಸರನ್ನಿಟ್ಟಂತೆ ತೋರುತ್ತದೆ. ಪುಣಿಸನ ತಾತನಾದ ಪುಣಿಸಮಯ್ಯ, "ಶಾಸನವಾಚಕ ಚಕ್ರವರ್ತಿ" ಎಂದು ಖ್ಯಾತನಾಗಿದ್ದ. ಚಾಮರಾಜನಗರದಲ್ಲಿರುವ ಪಾರ್ಶ್ವನಾಥ

ಬಸದಿಯನ್ನು ಇಮ್ಮಡಿ ಪುಣಿಸಮಯ್ಯನು ಕಟ್ಟಿಸಿದನು. ಈತನ ಗುರು ದ್ರವಿಡಾನ್ವಯದ ಅಜಿತಮುನಿಪ.

ಕ್ರಿ.ಶ ೧೧೭೩ ಕುಲಗಾಣ ಶಾಸನದಲ್ಲಿ (ಚಾನ ೩೪೩) ಅಲ್ಲಿ ಬಸದಿಗೆ ಇಡೈನಾಡಿನ ಅರವತ್ತು ಪ್ರಭುಗಾಮುಂಡರು ದತ್ತಿಬಿಟ್ಟ ವಿಷಯವಿದೆ. ಶ್ರೀಪಾದಿರಾಜದೇವ ಅಥವಾ ಶ್ರೀವಾದಿರಾಜದೇವ ಅಥವಾ ಶ್ರೀ ವಾದಿರಾಜದೇವ ಈ ದತ್ತಿಯನ್ನು ಸ್ವೀಕರಿಸಿದ ವ್ಯಕ್ತಿ. ಅಳುತ್ತಿದ್ದ ಹೊಯ್ಸಳ ದೊರೆ ಇಮ್ಮಡಿ ಬಲ್ಲಾಳ.

ಹೊಯ್ಸಳ ಸೋಮೇಶ್ವರನ ಅಳ್ವಿಕೆಗೆ ಸೇರಿದ ಎಡೂರು ಶಾಸನದು (ಚಾನ ೧೨೮) ಕಾಲ ಕ್ರಿ.ಶ ೧೨೪೭. ಪ್ರಸ್ತುತ ಶಾಸನದ ಮಹಾಪ್ರಧಾನ ಪೆರುಮಾಳ ದಣ್ಣಾಯಕನನ್ನು ಉಲ್ಲೇಖಿಸುತ್ತದೆ. ಈತ ಸೋಮೇಶ್ವರನ ತರುವಾಯ ಮುಮ್ಮಡಿ ಬಲ್ಲಾಳನ ಕಾಲದಲ್ಲಿಯೂ ಅಧಿಕಾರಿಯಾಗಿದ್ದನೆಂದು ತಿಳಿದುಬರುತ್ತದೆ. ಆದ್ದರಿಂದ ಈತ ಚಿಕ್ಕವಯಸ್ಸಿನಲ್ಲಿಯೇ ಅಧಿಕಾರಿಯಾಗಿದ್ದನೆಂದು ಊಹಿಸಬಹುದು.

ಮುಮ್ಮಡಿ ನರಸಿಂಹನ ಕಾಲದ ಕ್ರಿ.ಶ. ೨೭೩ರ ಕಟ್ಟವಾಡಿ ಶಾಸನದಿಂದ (ಚಾನ ೩೧೦) ಹದಿನಾಡು ಪ್ರಾಂತ್ಯವು ಕುಮಾರನಾಡು, ಹಿರಿಯನಾಡು ಹಾಗೂ ತೊರೆನಾಡು ಎಂಬ ಮೂರು ಉಪನಾಡುಗಳಿಂದ ಕೊಡಿತ್ತೆಂದು ತಿಳಿದುಬರುತ್ತದೆ. ಕ್ರಿ.ಶ. ೧೨೯೪ ಮುಮ್ಮಡಿ ವೀರ ಬಲ್ಲಾಳನ ಹೊಮ್ಮ ಶಾಸನವು (ಚಾನ ೧೪೯) ತೊರೆನಾಡು, ತಗಡೂರು ಹಾಗೂ ಮೂಗೂರು ಕುಮಾರನಾಡಿನ ಭಾಗಗಳೆಂದು ತಿಳಿಸುತ್ತದೆ. ಅಂಚವಾಡಿಯ ಶಾಸನವು (ಚಾನ ೨೫೩) ಹಿರಿಯನಾಡಲ್ಲದೆ ಕೈಯರನಾಡು ಮತ್ತು ಪಕಳೀನಾಡು ಎಂಬ ಎರಡು ನಾಡುಗಳನ್ನು ಹೆಸರಿಸುತ್ತದೆ. ಇದರ ಕಾಲ ಕ್ರಿ.ಶ. ೧೨೭೩-೭೪ ಅಳುತ್ತಿದ್ದ ದೊರೆ ಮುಮ್ಮಡಿ ನರಸಿಂಹ ಆಲದೂರು ಶಾಸನದಲ್ಲಿ (ಚಾನ ೧೦೮) ಕೊಟ್ಟಿರುವ ತೇದಿ ವಿವರಗಳು ಸರಿಯಾಗಿಲ್ಲ.

ಹಳೇ ಆಲೂರು ಶಾಸನದ (ಚಾನ ೧೯೫) ಕಾಲ ಕ್ರಿ.ಶ ೧೨೭೮; ಅಳರಸ ಹೊಯ್ಸಳ ಮುಮ್ಮಡಿ ನರಸಿಂಹ. ಈ ಕಾಲದಲ್ಲಿ ಆಲೂರು ತೆಂಕಣ ಐಯಾವಳೆ ಎಂದು ಖ್ಯಾತವಾಗಿತ್ತು. ಈ ಊರಿನ ವೇಳರು, ಕೋವರು, ಕುಣಿಂದರು, ನಲ್ಲೊಡೆಯರು ಮುಂತಾದ ವಿವಿಧ ಜನಸಮುದಾಯದವರು ಸೇರಿ ಚಂದ್ರನಾಥ ಬಸದಿಯ ಜೀರ್ಣೋದ್ದಾರ ಮಾಡಿ, ಆ ಬಸದಿಯಲ್ಲಿ ಪೂಜಾದಿ ಸೇವೆ ನಡೆಯಲೆಂದು ಭೂಮಿಕಾಣಿ ಹಾಗೂ ಮನೆಯನ್ನು ನೀಡಿದರು. ಆದರೆ ಈಗ ಬಸದಿ ಇಲ್ಲ. ಪ್ರಸ್ತುತ ಶಾಸನವು ಸುವರ್ಣಾವತಿ ನದೀ ತೀರದ ಮಂಟಪದ ಕಲ್ಲಿನ ಮೇಲಿದೆ. ಮುಮ್ಮಡಿ

ಬಲ್ಲಾಳನ ಕಾಲದ ಚಾಮರಾಜನಗರ ತಮಿಳು ಶಾಸನವು (ಚಾನ ೬೨) ಸ್ಥಳದ ದೇವಾಲಯದ ಶ್ರೀ ವೈಷ್ಣವರು ಭಾರದ್ವಾಜಗೋತ್ರದ ವಾಳ್ಳೈಯಮ್ಮು ಗಿಯಾರಂಡುತ್ತಗ್ಯೆ ಅಳಗಿಯಾಸ್ ಎಂಬಾತನಿಗೆ ಗ್ರಾಮವೊಂದನ್ನು ಗಿಯಾರಂಡುತ್ತಗ್ಯೆ ಅಳಗಿಯಾನ್ ಎಂಬಾತನಿಗೆ ಗ್ರಾಮವೊಂದನ್ನು ದಾನವಿತ್ತು ವಿಷಯವನ್ನು ತಿಳಿಸುತ್ತದೆ. ಆದರೆ ದೇವಾಲಯದ ಹೆಸರಿಲ್ಲ. ಶಾಸನವು ಲಕ್ಷ್ಮೀಕಾಂತ ದೇಗುಲದ ತಳಪಾಳದ ಕಲ್ಲಿನ ಮೇಲೆ ಇರುವುದರಿಂದ ಶಾಸನೋಕ್ತ ವೈಷ್ಣವರು ಈ ದೇವಾಲಯದ ಧರ್ಮದರ್ಶಿಗಳಾಗಿದ್ದಿರಬೇಕು. ದಾನಪಡೆದಾತ ಮಹಾಮಂಟಪವೊಂದನ್ನು ಕಟ್ಟಿಸಿದ್ದ.

ಕೊತ್ತಲವಾಡಿ ಶಾಸನದಿಂದ (ಚಾನ ೩೦೯) ಮಾಧವ ದಣ್ಣಾಯಕನು ತೆರಕಣಾಂಬಿಯ ವರದರಾಜ ಅಲ್ಲಾಳನಾಥ ದೇವರ ಪ್ರತಿಷ್ಠಾಪಿಸಿ ದೇವರಿಗೆ ದತ್ತಿ ನೀಡಿದ ವಿಷಯ ತಿಳಿದು ಬರುತ್ತದೆ. ಈ ಸಂಧರ್ಭದಲ್ಲಿ ಆತನ ಮಗ ಕೇತಯ ದಣ್ಣಾಯಕನೂ ಜೊತೆಯಲ್ಲಿದ್ದ. ದಾನಿಯು ತೆರಕಣಾಂಬಿ ನೆಲೆವೀಡಿನಿಂದ ಪದಿನಾಲ್ಕು ನಾಡನ್ನು ಪಾಲಿಸುತ್ತಿದ್ದ. ಪ್ರಸ್ತುತ ಶಾಸನವು ಕೊತ್ತಲವಾಡಿ ಗ್ರಾಮಕ್ಕೆ ಸೇರಿದುದಾಗಿರಬೇಕು. ಈ ಶಾಸನದ ಕಾಲ ಕ್ರಿ.ಶ. ೧೩೦೩. ಇದೇ ಮಾಧವದಣ್ಣಾಯಕನು ಕ್ರಿ.ಶ. ೧೩೧೬ ರಲ್ಲಿ ವಿದ್ಯಾನಿಧಿ ಪ್ರಸನ್ನಕೇಶವಪುರ ಎಂಬ ಅಗ್ರಹಾರವನ್ನು ಸ್ಥಾಪಿಸಿದ ಶಾಸನಪಾಠ ಪೂರ್ಣವಾಗಿ ದೊರೆಯುವುದಿಲ್ಲ. ಹೊಯ್ಸಳ ದೊರೆ ಮುಮ್ಮಡಿ ನರಸಿಂಹ ಮತ್ತು ಅವನ ಮಗ ಮುಮ್ಮಡಿ ಬಲ್ಲಾಳ ಇಬ್ಬರ ಕಾಲದಲ್ಲಿಯೂ ಈ ದಣ್ಣಾಯಕ ಅದಿಕಾರದಲ್ಲಿದ್ದನೆನ್ನುವುದು ಮೇಲಿನ ಎರಡು ಶಾಸನಗಳಿಂದ ವಿಧಿತವಾಗುತ್ತದೆ. ಈತನ ಜನ್ಮ ಸ್ಥಳ ಈಗಿನ ಹರದನಹಳ್ಳಿ. ಈ ಗ್ರಾಮದಲ್ಲಿನ ಅಣೆಲೇಶ್ವರ ದೇವಾಲಯವನ್ನು ಮಣಿಯದ (ಎಂದರೆ ಈಗಿನ ಹರದನಹಳ್ಳಿ) ಪುರುಸಗೌಡನ ಮಗನಾದ ಮಾರಗೌಡನು ಕ್ರಿ.ಶ. ೧೩೧೬ ರಲ್ಲಿ ಕಟ್ಟಿಸಿದನೆಂದು ಅಲ್ಲಿನ ಶಾಸನವೊಂದು (ಚಾನ ೨೬೩) ತಿಳಿಸುತ್ತದೆ. ಈತ ಮರಣಕಾಲದಲ್ಲಿಯೂ ಈತ ದಾನವಿತ್ತುದು (ಸಾವ ಹೊತ್ತಿನಲ್ಲಿ ಕೊಟ್ಟ ಶಿಲಾಶಾಸನ) ಇವನ ದಾನಶೀಲ ಗುಣವನ್ನು ಮನದಟ್ಟು ಮಾಡಿಕೊಡುತ್ತದೆ. ಕ್ರಿ.ಶ. ೧೩೪೦ ರಲ್ಲಿ, ನಾಲ್ಕನೆಯ ಬಲ್ಲಾಳನು ಆಳುತ್ತಿದ್ದಾಗ, ಹರದನಹಳ್ಳಿಯ ಅಣಿಲೇಶ್ವರ ದೇವಾಲಯಕ್ಕೆ ಕಂಬಗಳನ್ನು ಬೇರೆ ಬೇರೆ ಗೌಡರುಗಳು ಮಾಡಿಸಿಕೊಟ್ಟ ಸಂಗತಿ ಹರದನಹಳ್ಳಿಯ ನಾಲ್ಕು ಶಾಸನಗಳಲ್ಲಿ (ಚಾನ ೨೭೫ ರಿಂದ ೨೭೮) ನಿರೂಪಿತವಾಗಿವೆ. ಅಣಿಲೇಶ್ವರ ದೇವಾಲಯಕ್ಕೆ ಈಗ ದಿವ್ಯಲಿಂಗೇಶ್ವರ ದೇವಾಲಯವೆಂಬ ಹೆಸರು ಬಂದಿದೆ.

ಬಲ್ಲಾಳ ದಪವಿರಸನ್ನು "ಕಾರುಣ್ಯದಿಂ ಕರುಣಿಸಿದ" ಹೊಸಬಾಳಿ ನಾಡನ್ನು ಪಾಲಿಸುತ್ತಿದ್ದ ಮಾಧವದಣ್ಣಾಯಕನು ತೆರಕಣಾಂಬೆಯ ಗೋಪೀನಾಥದೇವರಿಗೆ ಕಿಲಗೆರೆ ಮತ್ತು ಬೆಲಕುಪ್ಪೆ ಗ್ರಾಮಗಳನ್ನು ದಾನವಿತ್ತನೆಂದು ಕಿಲಗೆರೆ ಶಾಸನವು (ಚಾನ ೩೦೬) ತಿಳಿಸುತ್ತದೆ. ಈತನ ಬಿರುದುಗಳ "ಕೊಂಗಮಾರಿ" "ಹೊಯಿಸಳ ರಾಜ್ಯ ಲಕ್ಷ್ಮಿರಕ್ಷಾ ಪ್ರಕಾರ "ಏಕದಾಶೀವ್ರತನಿರತ" ಮುಂತಾದವು ಗಮನಾರ್ಹ.

**ವಿಜಯನಗರ :** ದಕ್ಷಿಣ ಭಾರತದ ಇತಿಹಾಸದಲ್ಲಿ ವಿಜಯನಗರದ ಉದಯವು ಒಂದು ಐತಿಹಾಸಿಕ ಅಗತ್ಯವಾಯಿತು. ವಿದ್ಯಾರಣ್ಯರ ಪ್ರೇರಣೆ ಮತ್ತು ಮತ್ತು ಹರಿಹರ ಹಾಗೂ ಬುಕ್ಕರ ಶೌರ್ಯ ಸಾಹಸಗಳಿಂದ ಹುಟ್ಟಿದ ಈ ಸಾಮ್ರಾಜ್ಯವು ಭಾರತೀಯ ಪರಂಪರೆ ಮತ್ತು ಸಂಸ್ಕೃತಿಗಳ ಬೇರುಗಳಿಗೆ ನೀರುಣಿಸಿ ಪುನರುಸ್ಥಾನಕ್ಕೆ ಕಾರಣವಾಯಿತು. ವಿಜಯನಗರದ ಅರಸರ ಕೆಲವು ಶಾಸನಗಳು ಚಾಮರಾಜನಗರ ತಾಲೋಕಿನಲ್ಲಿ ಕಾಣಿಸಿಗುತ್ತದೆ. ಸಂಖ್ಯಾ ದೃಷ್ಠಿಯಿಂದಲೂ ವಿಜಯನಗರದ ಶಾಸನಗಳಿಗೆ ಅಗ್ರಸ್ಥಾನ ಸಲ್ಲುತ್ತದೆ.

ಒಂದನೆಯ ಬುಕ್ಕನ ಆಳ್ವಿಕೆಯನ್ನು ಉಲ್ಲೆಖಿಸುವ ಮಲದೇವನಹಳ್ಳಿ ಶಾಸನವು(ಚಾನ೨೨೭) ದುರ್ದೃಯ್ವದಿಂದ ತುಂಡಾಗಿದ್ದು,ವಿವರಗಳೆಲ್ಲ ನಷ್ಠವಾಗಿದೆ. ಅದರಲ್ಲಿ ಕೂಟ್ಟಿರುವ ತೇದಿವಿವರಳೂ ಸರಿಯಾಗಿಲ್ಲ. ಹರಳುಕೋಟೆ ಶಾಸನವು(ಚಾನ೨೨೧) ಚಿಕ್ಕಕಂಪಣ್ಣ ವೂಡೆಯನ್ನು ಉಲ್ಲೇಖಿಸುತ್ತದೆ. ಇದರ ಕಾಲ ೧೪ ನೆಯ ಶತಮಾನವೆಂದು ಭಾವೆಸಬಹುದು. ಕ್ರಿಶ ೧೩೬೩ ಮತ್ತು ೧೩೬೮ರ ಹರದನಹಳ್ಳಿ ಎರಡು ಶಾಸನಗಳು(ಕ್ರಮವಾಗಿ ಚಾನ ೨೬೪ ಮತ್ತು ೨೬೦) ಬುಕ್ಕನ ಕಾಲವಾಗಿದ್ದು ಮಹಾಪ್ರಧಾನ ಬಸವಯ್ಯ ದಣ್ಣಾಯಕನನ್ನು ಉಲ್ಲೇಖಿಸುತ್ತದೆ. ಈ ಅಧಿಕಾರಿಯ "ಬಲದಕಯ್ಯ ಭಂಡಾರ" ಎನಿಸಿದ ಗಣಪತಿ ಎಂಬಾತ "ವಿಷ್ಣುವರ್ಧನ ಪ್ರತಾಪಹೊಯ್ಸಳ ಭುಜಬಳದೇಶದೊಳಗೆ ಕಾವೇರಿಯ ದಕ್ಷಿಣ ಭಾಗದ ಪ್ರದೇಶವನ್ನು ಪಆಲಿಸುತ್ತಿದ್ದ.

ಕ್ರಿ.ಶ ೧೩೮೦ರ ಇಮ್ಮಡಿ ಹರಿಹರನ ಅಳ್ವಿಕೆಯ ಕಾಲದ, ಹೊಮ್ಮ ಶಾಸನವು (ಚಾನ ೧೪೮) ಅರಸನು ಸಂಗಮ ಮತ್ತು ಕಾಮಾಯಿಯ ಮೊಮ್ಮಗನೆಂದು ತಿಳಿಸುತ್ತದೆ. ಈ ಕಾಲದಲ್ಲಿ ಬಲ್ಲಪ್ಪ, ಹದಿನಾಡನ್ನು ಅಳುತ್ತಿದ್ದ ಕ್ರಿ.ಶ. ೧೪೫೭ ರ ಹರದನಹಳ್ಳಿ ಶಾಸನವು (ಚಾನ ೨೬೧) ಹೊಯ್ಸಳ ದೇಶವನ್ನು ಪಾಲಿಸುತ್ತಿದ್ದ ಆಚಣ್ಣವೊಡೆಯನ್ನು ಉಲ್ಲೇಖಿಸುತ್ತದೆ. ಆತ ಮಗಪ್ಪದಣ್ಣಾಯಕರ "ಬಲದಕಯ್ಯ

ಭಂಡಾರವಾಗಿದ್ದ ಮೂರು ದಶಕಗಳ ಅವಧಿಯಲ್ಲಿ ಈ ಪ್ರದೇಶದಲ್ಲಿನ ಆಡಳಿತಗಾರರು ಬೇರೆ ಬೇರೆಯಾಗಿದ್ದುದನ್ನು ಗಮನಿಸಬಹುದು.

ಕ್ರಿ.ಶ. ೧೪೨೨ ಮಲೆಯೂರಿನ ಶಾಸನಗಳು (ಚಾನ ೩೫೫ ಮತ್ತು ೩೬೨) ಒಂದನೆಯ ದೇವರಾಯನ ಮಗನಾದ ಹರಿಹರರಾಯವೊಡೆಯನು ಕನಕಗಿರಿಯ ವಿಜಯನಾಥದೇವರಿಗೆ ಮಲೆಯೂರು ಮತ್ತು ಅದರ ಉಪಗ್ರಾಮಗಳನ್ನು ಹಾಗೂ ಕೆಲವು ಸುಂಕಾದಾಯಗಳನ್ನು ದಾನವಿತ್ತ ಸಂಗತಿಯನ್ನು ನಿರೂಪಿಸುತ್ತವೆ. ಕೊಲಗಣದ (ಕುಲಗಾಣ) ವಾಸುದೇವರಿಗೆ ಹಿಂದೆ ದಾನವಿತ್ತಿದ್ದ ಮಲೆಯೂರಿನ ಭೂಮಿಕಾಣಿಗಳನ್ನು ಹೊರತುಪಡಿಸಿ ಉಳಿದ ಭಾಗವನ್ನು ದಾನ ನೀಡಿದೆ ಎನ್ನುವ ಅಂಶವನ್ನು ಎರಡನೆಯ ಶಾಸನ ಸ್ಪಷ್ಟಪಡಿಸುತ್ತವೆ.

ಇಮ್ಮಡಿ ದೇವರಾಯನು ಕಾಲದ ಕ್ರಿ.ಶ. ೧೪೨೫ ರ ಹರದನಹಳ್ಳಿಯ ಶಾಸನವು (ಚಾನ ೨೬೫) ಹರಿಯಪ್ಪ ದಣ್ಣಾಯಕನನ್ನು ಹಾಗೂ ಕ್ರಿ.ಶ. ೧೪೨೯ ಪುಣಜೂರು ಶಾಸನವು (ಚಾನ ೨೪೦) ದೇವದಣ್ಣಾಯಕನನ್ನು ಉಲ್ಲೇಖಿಸುತ್ತದೆ.

ಕ್ರಿ.ಶ. ೧೫೧೩ ರ ಕೃಷ್ಣದೇವರಾಯನ ಭಂಡಿಗೆರೆ ಶಾಸನವು (ಚಾನ ೨೩೩) ಹರದನಹಳ್ಳಿಯ ದಿವ್ಯಲಿಂಗ ಅಣಿಲೇಶ್ವರದೇವರಿಗೆ ಭೂಮಿ ದಾನ ನೀಡಿದ ವಿಷಯವನ್ನು ದಾಖಲಿಸುತ್ತದೆ. ಹೊಂಗನೂರಿನ ಶಾಸನದಲ್ಲಿ (ಚಾನ ೧೬೨) ಸ್ವಾರಸ್ಯಕರ ಸಂಗತಿಯೊಂದು ನಿರೂಪಿತವಾಗಿದೆ. ದೊಡ್ಡಣ್ಣ ಸೆಟ್ಟಿ ಎಂಬಾತನಿಗೆ ಸೇರಿದ ಹತ್ತು ಅಂಕಣದ ಗೃಹ ನಿವೇಶನವೊಂದನ್ನು ಅರಮನೆಗೆ ತೆಗೆದುಕೊಂಡು ಬದಲಾಗಿ ಆತನಿಗೆ ನಿವೇಶನ ನಂಜೇದೇವನಿಗೆ ಸೇರಿದ್ದು, ಆತ ಅದರ ಮೇಲಿನ ಕುಳಸ್ಥೆ (ತೆರಿಗೆ) ತೆರಲಾರದ ದುಃಸ್ಥಿತಿಯಲ್ಲಿದ್ದ, ಆದರಿಂದ ಆತ ಅದನ್ನು ಅರಮನೆಗೆ ಒಪ್ಪಿಸಿ "ಕೆಂಪೊತ್ತಿದ್ದವೋಲೆ" ಯನ್ನು ನೀಡಿದ. ಈ ಓಲೆ ಬಹುಶಃ ಹಕ್ಕು ಪತ್ರವಾಗಿರಬಹುದು. ಈ ಶಾಸನದ ಕಾಲ ಕ್ರಿ.ಶ. ೧೫೧೫ ಸಾಳುವ ಗೋವಿಂದರಾಜಯ್ಯನಿಗೆ ಉಮ್ಮತ್ತೂರು ನಾಯಕನ ಪ್ರಾಪ್ತವಾಗಿತ್ತು. ಕ್ರಿ.ಶ. ೧೫೨೩ರ ಹರಳುಕೋಟೆ ಶಾಸನದಲ್ಲಿ (ಚಾನ ೨೨೪) ಜಡೆಯೂರು ಮುದಲಿಯೂರು ಎಂಬ ಮಾಗಣಿಕಾರನ ಉಲ್ಲೇಖವಿದೆ. ಅರಸನ ಧರ್ಮಕೀರ್ತಿ ಹೆಚ್ಚಲೆಂದುಅವರಸರದ ದೇಮರಸಯ್ಯನ ನಿರೂಪದ ಮೇರೆಗೆ ತಿಮ್ಮರಾಜನು ದೇವಾಲಯವೊಂದರ ಗರ್ಭಗೃಹ, ಸುಕನಾಸಿ, ಮತ್ತು ಇತರ ಭಾಗಗಳ ಜೀರ್ಣೋದ್ಧಾರ ಮಾಡಿದನೆಂದು ಕ್ರಿ.ಶ. ೧೫೨೬ರ ಉಮ್ಮತ್ತೂರು ಶಾಸನದಿಂದ ತಿಳಿದುಬರುತ್ತದೆ. ಆದರೆ ದೇವಾಲಯದ ಹೆಸರು ನಷ್ಟವಾಗಿದೆ. ಈ ಶಾಸನೋಕ್ತ

ದೇಮರಸಯ್ಯನಿಗೆ ಉಮ್ಮತ್ತೂರು ಸೀಮೆಯ ನಾಯಕತನ ದೊರೆಕಿತ್ತೆಂದು ಹೆಗ್ಗೊಠಾರ ಶಾಸನವು (ಚಾನ ೨೧೭) ತಿಳಿಸುತ್ತದೆ. ಅರಸನ ಅದೇಶಾನುಸಾರ ಹೆಗ್ಗೊಠಾರ ಮತ್ತು ಅದರ ಉಪಗ್ರಾಮಪುರ ಇವೆರಡನ್ನೂ ಸರ್ವಸ್ವಾಮ್ಯ ಸಹಿತವಾಗಿ ಒಮ್ಮಾಪುರದ ಬಾಲಕೃಷ್ಣದೇವರ ಸೇವೆಗೆ ನೀಡಲಾಯಿತು. ದಾನವಿತ್ತದು ತುಂಬಭದ್ರಾ ತೀರದ ಪಂಪಾ ಕ್ಷೇತ್ರದಲ್ಲಿ.

ಕ್ರಿ.ಶ. ೧೫೩೧ ರ ನಂಜೇದೇವರಪುರ ಶಾಸನವು (ಚಾನ ೪೦೦) ಅರಸ ಸದಾಶಿವರಾಯನ ನಿರೂಪದ ಮೇರೆಗೆ ಪೆರುಮಾಳ ಅದಿಕಾರಿಯ ಉಯಂಬಳಿ ಸ್ಥಳದ ದಣ್ಣಾಯಕನ ಪುರವನ್ನು ದತ್ತಿ ಬಿಟ್ಟನು. ಇದೇ ವರ್ಷ ದಳವಾಯಿ ರಂಗ ನಾಯಕನು ಉಮ್ಮತ್ತೂರ ರಂಗನಾಥದೇವರಿಗೆ ದಾನವಿತ್ತ (ಚಾನ ೮೯) ಸೋಮಶಿಲಾದೇವ ರಾಉತ್ತರಾಯ ಮಹಾಪಾತ್ರೆ ಅರಸು ತೆರಕಣಾಂಬಿಯ ತಿರುಮಲದೇವರಿಗೆ ಗ್ರಾಮ ದಾನ ಮತ್ತು ಭೂಮಿದಾನ ಮಾಡಿದ ವಿಷಯವನ್ನು ಕ್ರಿ.ಶ. ೧೫೩೬ ರ ದಾಸನಪುರ ಶಾಸನ (ಚಾನ ೩೦೨) ನಿರೂಪಿಸುತ್ತದೆ. ಮಹಾಪಾತ್ರೆ ಎಂಬ ಹೆಸರೇ ಈತನ ಒರಿಯಾ ಮೂಲವನ್ನು ಸೂಚಿಸುತ್ತದೆ. ಕೃಷ್ಣದೇವರಾಯನ ಕಳಿಂಗ ವಿಜಯದ ಅನಂತರ ಅರಸನ ಜೊತೆ ಬಂದ ಅಲ್ಲಿನ ಕೆಲವರು ವಿಜಯ ನಗರ ಸಾಮ್ರಾಜ್ಯದಲ್ಲಿ ಉನ್ನತ ಅಧಿಕಾರಿಗಳಾಗಿದ್ದರೆಂದು ತೋರುತ್ತದೆ. ಅಚ್ಯುತರಾಯನ ಅಧಿಕಾರಿಗಳಲ್ಲಿ ಒಬ್ಬನಾದ ರಾಮಾಭಟ್ಟಯ್ಯನ ಅಪ್ಪಣೆಯ ಮೇರೆಗೆ ಹದಿನಾಡನ್ನು ಪಾಲಿಸುತ್ತಿದ್ದ ಯೆಲಪ್ಪಯ್ಯನ ಅಣಿಲೇಶ್ವರದೇವರಿಗೆ, ದಾನ ವಿತ್ತನೆಂದು ಹರದನಹಳ್ಳಿ ಶಾಸನದಿಂದ (ಚಾನ ೨೬೯) ತಿಳಿದುಬರುತ್ತದೆ.

ಸದಾಶಿವರಾಯನ ಮಾಂಡಲಿಕರಲ್ಲಿ ಒಬ್ಬನಾದ ಮಹಾ ಮಂಡಲೇಶ್ವರ ರಾಮರಾಜ ತಿರುಮಲರಾಜಯ್ಯದೇವನು. ಚಾಮರಾಜನಗರ ತಾಲ್ಲೂಕಿನ ಕೆಲವು ಶಾಸನಗಳಲ್ಲಿ (ಚಾನ ೨೫೪, ೯೫, ೨೧೭, ೩೧೫ ಇತ್ಯಾದಿ) ಉಲ್ಲೇಖಗೊಂಡಿದ್ದಾನೆ. ಈತನ ಮಗ ರಾಮರಾಜಯ್ಯ, ಈ ತಂದೆ ಮಕ್ಕಳು ಕ್ರಿ.ಶ. ೧೫೭೦ರ ಕಾಗಲವಾಡಿ ಶಾಸನದಲ್ಲಿ (ಚಾನ ೧೭೭) ಕ್ರಮವಾಗಿ ದಾನಿ ಮತ್ತು ಪ್ರತಿಗ್ರಹಿಗಳಾಗಿ ಕಂಡು ಬರುತ್ತದೆ. ಸ್ವಾರಸ್ಯಕರ ಸಂಗತಿ; ಅಷ್ಟೇ ಅಲ್ಲ ತಂದೆಗೆ ಮಗನೇ ಕಾರ್ಯಕರ್ತನಾಗಿದ್ದ.

ಒಂದನೆಯ ವೆಂಕಟಪತಿಯ ಆಳ್ವಿಕೆಗೆ ಸೇರಿದ ಕ್ರಿ.ಶ. ೧೫೮೩ರ ಮೇಲುಮಾಳ ಶಾಸನದಿಂದ (ಚಾನ ೨೧೬) ಹದಿನಾಡ ಸೀಮೆಯ ಪ್ರಭು ದೇವಪ್ಪಗೌಡನ ಮಗನಾದ ರಾಜರಾಜಮನಾಯಕನು ಸುತ್ತೂರ ಸಿಂಹಾಸನಕ್ಕೆ ಕರ್ತರಾದ ಶಿವರಾತ್ರೆದೇವರ ಶಿಷ್ಯ

ಚೆನ್ನಬಸವರಾಜದೇವರಿಗೆ ಹಸುರಹಳ್ಳಿಯನ್ನು ದಾನವಿತ್ತ ಸಂಗತಿ ತಿಳಿದುಬರುತ್ತದೆ. ಕ್ರಿ.ಶ. ೧೬೧೩ ರಲ್ಲಿ ನಂಜರಾಜವೊಡೆಯ ಹದಿನಾಡು ಸೀಮೆಯ ಪ್ರಭುವಾಗಿದ್ದ (ಚಾನ ೨೫೬)

ಕ್ರಿ.ಶ. ೧೬೦೫ ಚಾಮರಾಜನಗರ ಶಾಸನವು (ಚಾನ ೧) ಅರೆಕೊತಾರದ ಪ್ರಭು ಚಂದ್ರಶೇಖರವೊಡ್ಡೆಯ ಮತ್ತು ಕಮ್ಮರವಳ್ಳಿಯ ಪ್ರಭು ಮಲರಾಜವೊಡೆಯರ ನಡುವೆ ಏರ್ಪಟ್ಟಿ ಒಂದು ಒಪ್ಪಂದವನ್ನು ಉಲ್ಲೇಖಿಸುತ್ತದೆ. ಈ ಒಪ್ಪಂದದಿಂದಾಗಿ ಹಂಗರೆಪುರವು ಅರೆಕಾತಾರದ ವೀರಭದ್ರ ದೇವರಿಗೆ ಸಂದಿತು. ಶ್ರೀರಂಗಪಟ್ಟಣ ಮಠದಲ್ಲಿ ನಡೆಯುವ "ದಾಸೋಹ"ಕ್ಕಾಗಿ ಕ್ರಿ.ಶ. ೧೬೧೦ ರಲ್ಲಿ ರಾಮರಾಜಯ್ಯ ತಿರುಮಲ್ಲ ರಾಜಯ್ಯದೇವನು ಕಿಲಗೆರೆ ಗ್ರಾಮವನ್ನು ದಾನವಿತ್ತು (ಚಾನ ೩೦೭)

**ಮೈಸೂರಿನ ಒಡೆಯರು:** ಕ್ರಿ.ಶ. ೧೬೪೪ ರ ಹೊಂಗನೂರು ಶಾಸನವು (ಚಾನ ೧೭೦) ಕಂಠೀರವ ಶಾಸನಗಳು (ಚಾನ ೧೬೯, ೧೭೧) ಈ ಗ್ರಾಮದಲ್ಲಿವೆ. ಮೊದಲಶಾಸನ ಅಲ್ಲಲ್ಲಿ ಸವೆದುಹೋಗಿದ್ದು, ಅಗ್ರಹಾರವೊಂದರ ಸ್ಥಾಪನೆಗೆ ಸಂಬಂಧಿಸಿದುದೆಂದು ತೋರುತ್ತದೆ. ಎರಡನೆಯ ಶಾಸನವು ಕಾಶಿ ವಿಶ್ವೇಶ್ವರ ಮತ್ತು ಇತರ ದೇವರಿಗೆ ಗ್ರಾಮಗಳ್ನು ದತ್ತಿಬಿಟ್ಟ ವಿಷಯವನ್ನು ತಿಳಿಸುತ್ತದೆ.

ಕೇತಹಳ್ಳಿ ಶಾಸನದ (ಚಾನ ೩೭೯) ಪ್ರಕಾರ ಕ್ರಿ.ಶ. ೧೬೬೪ ರಲ್ಲಿ ದೇವರಾಜವೊಡೆಯನು ಅಳುತ್ತಿದ್ದ ರಾಜಮಾತೆ ಅಮೃತಮ್ಮಣ್ಣೆ ತಾನು ಮೈಸೂರಿನಲ್ಲಿ ಕಟ್ಟಿಸಿದ ಮಹತ್ತಿನ ಮಠದಲ್ಲಿ ಅನ್ನದಾನ ನಡೆಸಲೆಂದು ಕೇತಹಳ್ಳಿಯನ್ನು ದಾನ ನೀಡಿದಳು.

ಚಿಕ್ಕದೇವರಾಜವೊಡೆಯನ ಕ್ರಿ.ಶ. ೧೬೭೫ ರ ಚಾಮರಾಜನಗರ ಶಾಸನವು (ಚಾನ ೧೧) ವಿಶಿಷ್ಟ ಸಂಗತಿಯೊಂದನ್ನು ನಿರೂಪಿಸುತ್ತದೆ. ಅರಸನು ಗಯಾಕ್ಷೇತ್ರದಲ್ಲಿ ತನ್ನ ತಂದೆಯ ಶ್ರಾದ್ಧಾದಿಕರ್ಮಗಳನ್ನು ಕೃಷ್ಣದೀಕ್ಷಿತ ಎಂಬಾತನಿಂದ ಮಾಡಿಸಿದ. ಅದಕ್ಕಾಗಿ ಆತನಿಗೆ ಕಬ್ಬಲಿಗನಪುರ ಹಾಗೂ ಪ್ರತಿಗ್ರಹಿಯ ಹೆಸರುಗಳಲ್ಲಿ ಪುನರ್ನಾಮಕರಣ ಮಾಡಲಾಯಿತು. ಪ್ರಸ್ತುತ ಶಾಸನದಲ್ಲಿ ಮೈಸೂರರಸರ ವಂಶಾವಳಿಯನ್ನು ಕೊಟ್ಟಿದೆ. ಈ ತಾಮ್ರಶಾಸನದ ಕರ್ತೃ ತಿರುಮಲಾರ್ಯ ಕ್ರಿ.ಶ. ೧೬೭೬ರ ವೆಂಕಟಯ್ಯನ ಛತ್ರ ಶಾಸನವು (ಚಾನ ೨೪೯) ಉಲ್ಲೇಖಿಸುವ ದೇವರಾಜವೊಡೆಯನು ಚಿಕ್ಕದೇವರಾಜನೇ. ಹರದನಹಳ್ಳಿಯಲ್ಲಿ ಛತ್ರವೊಂದರ

ನಿರ್ವಹಣೆಗಾಗಿ ಬೊಮ್ಮನಹಳ್ಳಿಯನ್ನು ದಾನ ನೀಡಲಾಯಿತೆಂದು. ಈ ಶಾಸನ ತಿಳಿಸುತ್ತದೆ.

ಕ್ರಿ.ಶ. ೧೭೪೪ ರ ಹರದನಹಳ್ಳಿ ತಾಮ್ರ ಶಾಸನವು (ಚಾನ ೨೯೧) ಇಮ್ಮಡಿ ಕೃಷ್ಣರಾಜವೊಡೆಯನ ಕಾಲದ್ದು, ಇದರಲ್ಲಿ ಕೊಟ್ಟಿರುವ ರಾಜವಂಶಾವಳಿಯಿಂದ ಅರಸುಪೀಳಿಗೆಯು ಅನುಕ್ರಮವಾಗಿ ಅವಿಚ್ಛಿನ್ನವಾಗಿ ಹರಿದುಬರಲಿಲ್ಲವೆನ್ನುವುದು ಸ್ಪಷ್ಟಪಡುತ್ತದೆ. ಚಾಮರಾಜನಗರ ತಾಮ್ರಶಾಸನ (ಚಾನ ೧೧) ನೀಡುವ ವಂಶಾವಳಿಗೂ ಇದಲ್ಲಿ ಕೊಟ್ಟಿರುವ ವಂಶಾವಳಿಗೂ ಹೊಂದಿಕೆಯಾಗುವುದಿಲ್ಲ. ಈ ಶಾಸನವು ಕಳಲೆ ವಂಶಸ್ಥರಾದ ನಂಜರಾಜ ಮತ್ತು ದೇವರಾಜ ಎಂಬ ಮಂತ್ರಿಗಳ ವೃತ್ತಾಂತವನ್ನು ನೀಡುತ್ತದೆ. ಮೊದಲನೆಯವನು ಸರ್ವಾಧಿಕಾರಿ; ಎರಡನೆಯವನು ಮಿಡಿಗೇಶಿ, ಮಾಗಡಿ ಮತ್ತು ಸಾವಂದಿಯ ಪ್ರಭುಗಳನ್ನು ಸೋಲಿಸಿದ ವೀರ ಕ್ರಿ.ಶ. ೧೭೬೨ರ ಹಳೇಸರಗೂರು ಶಾಸನವು (ಚಾನ ೧೯೭) ಕಾಶಿವಾಶಿ ಜಯನಿ ರಾಮಭಟ್ಟರಿಗೆ ಬರೆಸಿಕೊಟ್ಟ ಕ್ರಯಭೂದಾನವನ್ನು ಕುರಿತಾದುದು. ಅರಸನೇ ಭೂಮಾರಾಟ ಮಾಡಿದ ಸಂಗತಿ ಗಮನಾರ್ಹ. ಇಂಥದೇ ಶಾಸನ ಯಳಂದೂರು ತಾಲ್ಲೂಕಿನಲ್ಲಿ ಸಹ ಇದೆ. ಕೊಳ್ಳೇಗಾಲದ ವ್ಯಾಪಾರಿ ವೀರಸೆಟ್ಟಿಯ ಮೂಲಕ ಕೊಂಡವರು ಹಣ ಸಂದಾಯ ಮಾಡಿದರು.

ಕ್ರಿ.ಶ. ೧೭೯೯ ರಿಂದ ೧೮೬೮ ರವರೆಗೆ ರಾಜ್ಯವಾಳಿದ ಮುಮ್ಮಡಿ ಕೃಷ್ಣರಾಜವೊಡೆಯನ ಹಲವು ಶಾಸನಗಳು ಆತನ ಧರ್ಮಪ್ರವೃತ್ತಿ ಮತ್ತು ದಾನಶೀಲತೆಗಳನ್ನು ಕೊಂಡಾಡುತ್ತವೆ. ಆತ ಕ್ರಿ.ಶ. ೧೮೨೮ ರಲ್ಲಿ ಅರಿಕುಠಾರಕ್ಕೆ ಚಾಮರಾಜನಗರವೆಂಬ ಹೊಸ ಹೆಸರಿಟ್ಟು, ಅಲ್ಲಿ ಚಾಮರಾಜೇಶ್ವರ ದೇವಾಲಯವನ್ನು ಕಟ್ಟಿಸಿದ (ಚಾನ ೫) ಇದಕ್ಕೆ ಎರಡು ವರ್ಷ ಮೊದಲು ಎಂದರೆ ೧೮೨೬ ರಲ್ಲಿ ಅಂಚವಾಡಿಯ ವೀರಭದ್ರ ದೇವಾಲಯದ ಜೀರ್ಣೋದ್ಧಾರ ಮಾಡಿದ (ಚಾನ ೨೪೮)

**ಧಾರ್ಮಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ವಿಷಯಗಳು** : ಭಾರತೀಯ ಸಂಸ್ಕೃತಿಯ ಎಲ್ಲ ಪ್ರಕಾರಗಳಲ್ಲಿಯೂ ಧರ್ಮವು ಅಂತರ್ವಾಹಿನಿಯಾಗಿದೆ. ನಮ್ಮ ಹಿರಿಯರ ಧರ್ಮದ ಪರಿಕಲ್ಪನೆ ಕೇವಲ ವ್ಯಕ್ತಿಗತವಾದುದಾಗಿರಲಿಲ್ಲ. ಅದು ಜನಪರವೂ ಪರಿಸರ ಪೋಷಕವೂ ಆಗಿತ್ತು. ಆದ್ದರಿಂದಲೇ "ಕೆರೆ-ಬಾವಿ ದೇವತಾಗೃಹ-ಅರವಂಟಿಗೆ-ಸತ್ರ ನಿರ್ಮಾಣಗಳು ಪರಹಿತ ಕಾರ್ಯಗಳಾಗಿದ್ದವು. ದೇವಾಲಯವು ವಿದ್ಯೆ ಧ್ಯಾನ ಮತ್ತು ಸಂಸ್ಕೃತಿಯ ಕೇಂದ್ರವಾಗಿತ್ತು. ಅರವಂಟಿಗೆ ದಾರಿಹೋಕರ ದಾಹ ತಣಿಸಿ ಆಯಾಸ

ನೀಗುವ ತಾಣವಾಗಿತ್ತು. ಸತ್ರವು ಪ್ರವಾಸಿಗಳಿಗೆ, ಪರಸ್ಥಳದ ಭಕ್ತರಿಗೆ ಉಳಿದುಕೊಳ್ಳಲು ನೆಲೆಕಲ್ಪಿಸುತ್ತಿತ್ತು. ಇಂತಜನೋಪಯೋಗಿ ಧರ್ಮಕಾರ್ಯಗಳು ಚಾಮರಾಜನಗರ ತಾಲ್ಲೂಕಿನ ಪ್ರದೇಶದಲ್ಲಿ ಹಿಂದಿನಿಂದ ನಡೆದುಕೊಂಡು ಬಂದಿವೆಯೆಂದು ಹೇಳಲು ಶಾಸನಾಧಾರಗಳು ದೊರೆಯುತ್ತದೆ.

ಕ್ರಿ.ಶ. ೯ನೆಯ ಶತಮಾನದಲ್ಲಿಯೇ ಎಲ್ಲೂರಿನಲ್ಲಿ ಕೆರೆಯೊಂದನ್ನು ಕಟ್ಟಿ, ಭೂಮಿ ದಾನ ನೀಡಿದ ಉಲ್ಲೇಖವಿದೆ. (ಚಾನ ೮೧) ಕ್ರಿ.ಶ. ೧೧ನೆಯ ಶತಮಾನದಲ್ಲಿ ಕಚ್ಚೆಗಾಮುಂಡನು ಕೊಳುಮ ಗ್ರಾಮದಲ್ಲಿ ಕೆರೆಗೆ ತೊಬೊಂದನ್ನು ಮಾಡಿಸಿದನೆಂದು ಹೊಂಗನೂರು ಶಾಸನದಿಂದ (ಚಾನ ೧೬೮) ತಿಳಿದುಬರುತ್ತದೆ. ಇದೇ ಊರಿನ ಇನ್ನೊಂದು ಶಾಸನವು ಅಂಕನಹಳ್ಳಿಯ ಮತ್ತು ಕೊಗ್ಗಿನಹಳ್ಳಿಯ ಜನರು ಕೆರೆಯೊಂದನ್ನು ಕಟ್ಟಿಸಿದ್ದ ವಿಷಯವನ್ನು ಉಲ್ಲೇಖಿಸುತ್ತದೆ. ಕಳಲೆ ನಂಜರಾಜಯ್ಯನ ಮನೆವಾರ್ತೆ ನಿರ್ವಹಿಸುತ್ತಿದ್ದ ವೀರೈಯ ಎಂಬಾತ ಕ್ರಿ.ಶ. ೧೭೫೮ ರಲ್ಲಿ ಮಲದೇವನಹಳ್ಳಿಯಲ್ಲಿ ಕೆರೆಯೊಂದನ್ನು ಕಟ್ಟಿಸಿದ್ದ ವಿಷಯವನ್ನು ಉಲ್ಲೇಖಿಸುತ್ತದೆ. ಕಳಲೆ ನಂಜರಾಜಯ್ಯನ ಮನೆವಾರ್ತೆ ನಿರ್ವಹಿಸುತ್ತಿದ್ದ ವೀರೈಯ ಎಂಬಾತ ಕ್ರಿ.ಶ. ೧೭೫೮ ರಲ್ಲಿ ಮಲದೇವನಹಳ್ಳಿಯಲ್ಲಿ ಕೆರೆಯೊಂದನ್ನು ಮಾಡಿಸಿದ (ಚಾ ೨೨೮) ಮರಿಯಾಲದ ಕೊಳದ ಮೇಲ್ಭಾಗದಲ್ಲಿ ನಿಂತಿರುವ ಶಾಸನದಿಂದ (ಚಾನ ೬೬) ಕ್ರಿ.ಶ. ೧೮೭೦ ರಲ್ಲಿ ಮೈಸೂರರಮನೆಯ "ಖಾಸ ಚೌರಿ" ಊಳಿಗದ ಮಲ್ಲಪ್ಪನವರ ಧರ್ಮಪತ್ನಿಯಾದ ಪುಟ್ಟನಂಜ್ಜೇರು ಅಮೃತಸರೋವರವನ್ನು ಕಟ್ಟಿಸಿದರೆಂದು ತಿಳದುಬರುತ್ತದೆ. ಸುಮಾರು ಇದೇ ಕಾಲದಲ್ಲಿ ಕರೀನಂಜಪುರದಲ್ಲಿ ಕೊಳವೊಂದು ರೂಪುಗೊಂಡಿತು. (ಚಾನ ೨೨೫) ಕ್ರಿ.ಶ. ೧೫೪೦ ರಲ್ಲಿ ಕಾಳಮಲ್ಲಿಕಾರ್ಜುನದೇವ ಮತ್ತು ಕೆಂಪಿನ ಲಿಂಗಣ್ಣೊಡೆಯರು "ಭಾವಿಯ ಜೀರ್ಣೋದ್ದಾರವನ್ನು ಮಾಡಿದರು. (ಚಾನ ೨೩೨)

ದೇವಾಲಯದ ನಿರ್ಮಾಣ ಮತ್ತು ಅದಕ್ಕೆ ದಾನ ನೀಡಿದ ನಿದರ್ಶನಗಳು ಹೇರಳವಾಗಿ ದೊರೆಯುತ್ತವೆ. ಕೆಲವನ್ನಷ್ಟೆ ಇಲ್ಲಿ ಗುರುತಿಸ ಬಹುದು. ಪೆರ್ಮಾಡಿಯ ಸೊಳೆ ಜೋಗಬ್ಬೆಯ ಮಗಳು ಚಾವುಂಡಬ್ಬೆ ಕ್ರಿ.ಶ. ೯ನೆಯ ಶತಮಾನದಲ್ಲಿ ಹೆಗ್ಗೊಠಾರದಲ್ಲಿ ಒಂದು ದೇಗುಲವನ್ನು ಕಟ್ಟಸಿದಳು (ಚಾನ ೩೮೫) ಕ್ರಿ.ಶ. ೯೮೨ ರಲ್ಲಿ ಮಲ್ಲಯ್ಯನುಂ ಮಾಡಿಸಿದ ದೇಗುಲಕ್ಕೆ ಮಳೂರು ಸಾವಿರ ಬ್ರಾಹ್ಮಣರು ಭೂದಾನ ಮಾಡಿದ ಸಂಗತಿ ಪುಣಜೂರು ಶಾಸನದಲ್ಲಿ ನಿರೂಪಿತವಾಗಿದೆ. (ಚಾನ ೨೪೧), ಚಾಮರಾಜನಗರದಲ್ಲಿನ ತ್ರಿಕೂಟ ಬಸದಿಯನ್ನು ಹೊಯ್ಸಳ ಸೇನಾನಿ ಪುಣಿಸಯ್ಯನ

ಕ್ರಿ.ಶ. ೧೨ನೆಯ ಶತಮಾನದಲ್ಲಿ ಕಟ್ಟಿಸಿದ (ಚಾನ ೨) ಮಾತ್ರವಲ್ಲ. ಆತ ಗಂಗವಾಡಿ ಪ್ರದೇಶವನ್ನು ಬಸದಿಗಳಿಂದ ಅಲಂಕರಿಸಿದ ಹೆಗ್ಗವಾಡಿಯ ಶುಭುಲಿಂಗೇಶ್ವರ ದೇವಾಲಯವನ್ನು ಸುಖನಾಸಿ "ಗರ್ಭಗೃಹಸ್ತೂಪಿಪರಿಯಸ್ತಿ" ಶಂಭುಗಾಮುಂಡನು ಕ್ರಿ.ಶ. ೧೨೪೨-೪೩ ರಲ್ಲಿ ನಿರ್ಮಿಸಿದ (ಚಾನ ೮೫) ಹರದನಹಳ್ಳಿ, ಮಲೆಯೂರು, ಹಳೇ ಆಲೂರು, ಕುಲಗುಣ, ಹರವೆ, ಹೊಮ್ಮ, ಸಾಗಡೆ ಉಮ್ಮತ್ತೂರ, ಅಂಚವಾಡಿ ಮುಂತಾದ ಸ್ಥಳಗಳಲ್ಲಿನ ದೇವಾಲಯ ಜಿನಾಯಗಳು ಖ್ಯಾತವಾಗಿದ್ದವು. ಕುದೇರಿನ ಮಲ್ಲಿಕಾರ್ಜುನ ದೇವಾಲಯ ಮುಂದಿನ ಬಲಿಪೀಠವನ್ನು ಮಲ್ಲವಡೆಯದ ಮುಂದಿನ ಬಲಿಪೀಠವನ್ನು ಕೆಂಗೋಜ (ಚಾನ ೧೨೧) ಮಾಡಿಸಿದರು. ತೆಳ್ಳನೂರು ಮಹಾ ಕಾಳಿದೇವಿಗೆ ಅಕ್ಕಸಾಲೆ ಕಲ್ಲೋಜನು ಕ್ರಿ.ಶ. ೧೩೮೮ರಲ್ಲಿ ಕಲ್ಲತೋರಣವನ್ನು ನಿಲ್ಲಿಸಿದನು (ಚಾನ ೧೨೦) ಚನ್ನಪ್ಪನಪುರದಲ್ಲಿ ಮಂಟಪವೊಂದನ್ನು ನಿರ್ಮಿಸಿದಾತ ಯರಪನಾಯಕ (ಚಾನ ೧೨೧) ಮಾಡಿಸಿದರು. ತೆಳ್ಳನೂರು ಮಹಾ ಕಾಳಿದೇವಿಗೆ ಅಕ್ಕಸಾಲೆ ಕಾಲ್ಲೋಜನು ಕ್ರಿ.ಶ. ೧೩೮೮ರಲ್ಲಿ ಕಲ್ಲ ತೋರಣವನ್ನು ನಿಲ್ಲಿಸಿದನು. (ಚಾನ ೧೨೦) ಚನ್ನಪ್ಪನಪುರದಲ್ಲಿ ಮಂಟಪವೊಂದನ್ನು ನಿರ್ಮಿಸಿದಾತ ಯರಪನಾಯಕ (ಚಾನ ೨೪೭). ಹರದನಹಳ್ಳಿಯ ದಿವ್ಯಲಿಂಗೇಶ್ವರ ದೇವಾಲಯದ ರಂಗಮಂಟಪಗಳನ್ನು ಕಟ್ಟಿಸಿಕೊಟ್ಟವರು ಮಂಚೆಗೃಡ (೨೭೫ ಕ್ರಿ.ಶ. ೧೩೪೦) ಹಿರಿಯಗೌಡ ಮತ್ತು ಇತರರು (೨೭೬-೭೮) ಅದೇ ದೇವಾಲಯದ ಸುಖನಾಸಿಯೊಳಗೆ ಇರುವ ಕಲ್ಲತೊಟ್ಟಿಯನ್ನು ಮಾಡಿಸಿ ಕೊಟ್ಟವನು ಬೆನಕ (೨೭೯). ಈ ದೇವಾಲಯದ ಪಶ್ಚಿಮಭಾಗದಲ್ಲಿ ಕ್ರಿ.ಶ. ೧೬೪೫ ರಲ್ಲಿ ಲಿಂಗಯ್ಯ ಮಂತ್ರಿಯು ಕಾಳಹಸ್ತೀಶ್ವರನ ಪ್ರತಿಷ್ಠೆ ಮಾಡಿಸಿದ (ಚಾನ ೨೭೧-೭೨) ದಕ್ಷಿಣಾಮೂರ್ತಿಯನ್ನು ಕ್ರಿ.ಶ. ೧೭೫೩ ರಲ್ಲಿ ರಾಮಸಮುದ್ರದ ಹನುಮಂತಯ್ಯ ಪ್ರತಿಷ್ಠೆ ಮಾಡಿಸಿದ (ಚಾನ ೨೭೩) ಒಂದು ದೇವಾಲಯದ ವಿವಿಧ ಭಾಗಗಳನ್ನು ಮೂರ್ತಿಗಳನ್ನು ವಾಹನಾಂಲಕಾರಗಳನ್ನು ಮಾಡಿಸಿಕೊಟ್ಟ ಹಲವು ನಿದರ್ಶನಗಳು ಚಾಮರಾಜನಗರದ ಶಾಸನಗಳಲ್ಲಿವೆ.

ಪಾಳು ಬಿದ್ದ ದೇವಾಲಯಗಳು ಜೀರ್ಣೋದ್ದಾರ ಕಾರ್ಯ ಪುಣ್ಯದ ಕೆಲಸವೆಂದು ನಮ್ಮ ಪೂರ್ವಿಕರು ನಂಬಿಕೊಂಡಿದ್ದರಿಂದ ಎಷ್ಟೋ ದೇವಾಲಯಗಳು ಈ ಕಾಲದ ವರೆಗೂ ಉಳಿದುಕೊಂಡು ಬರಲು ಸಾಧ್ಯವಾಯಿತು. ಕ್ರಿ.ಶ. ೧೮೨೭ರಲ್ಲಿ "ಶ್ರೀ ಕೃಷ್ಣರಾಯರಿಗೆ ಧರ್ಮಕೀರ್ತಿಯಾಗಬೇಕೆಂದು ಲಕ್ಕರಾಜಗಳ ಮಗ ತಿಂಮರಾಜಗಳು ಗರ್ಭಗೃಹ ಸುಕನಾಸಿ ಮೊದಲಾದ ಜೀರ್ಣೋದ್ದಾರರವನೂ ಮಾಡಿಸಿದ ವಿಷಯ

ಉಮ್ಮತ್ತೂರು ಶಾಸನದಲ್ಲಿದೆ. (ಚಾನ ೧೦೦) ಕ್ರಿ.ಶ. ೧೮೨೬ ರಲ್ಲಿ ಮೈಸೂರು ರಾಣಿ ಲಿಂಗಾಜಮ್ಮಣಿ ಅಂಚವಾಡಿಯ ವೀರಭದ್ರ ದೇವಾಲಯದ ಜೀರ್ಣೋದ್ಧಾರ ಮಾಡಿದ ವಿಷಯವನ್ನು ಗುಡ್ಡದ ಮಠ ಶಾಸನವು (ಚಾನ ೨೪೮) ತಿಳಿಸುತ್ತದೆ.

ಚಾಮರಾಜನಗರ ತಾಲ್ಲೂಕಿನ ಸಾಸನಗಳಲ್ಲಿ ಅನೇಕ ವೀರಶೈವ ಮಠಗಳು ಉಲ್ಲೇಖ ಕಂಡುಬರುತ್ತದೆ. ಚಂದ್ರಣಿ ಮಠ, ಕಂಚಿ ತೆಲುಗಾಣ್ಯದ ಮಠ, ವಾಣಿಜ್ಯ ಮಠ, ಕೆಂಬಲ್ಲುಮಠ ಹಾಗೂ ಮಹಾಲಿಂಗಿಮಠ (ಚಾನ ೨೯೬). ಉಮ್ಮತ್ತೂರು ಉಪ್ಪರಿಗೆಯ ಮಠಕ್ಕೆ (ಚಾನ ೨೨೯) ನಿರಾಸಿ ಮಠ ವೆಂಬ ಹೆಸರಿತ್ತು. ಈ ಮಠದ ಆರೋಗಣೆಯ ಅವಸರಕ್ಕೆ ಶ್ರೀ ರಂಗಪಟ್ಟಣದ ಉಭಯ ಕಾವೇರಿ ಮಧ್ಯದ ಗಂಗಾಧರ ದೇವರ ಸನ್ನಿಧಿಯಲ್ಲಿ "ಗ್ರಾಮವೊಂದನ್ನು ಕ್ರಿ.ಶ. ೧೫೪೪ ರಲ್ಲಿ ನೀಡಲಾಯಿತು (ಚಾನ ೨೧೭) ಕ್ರಿ.ಶ. ೧೫೯೩ ರಲ್ಲಿ, ಒಂದನೆಯ ವೆಂಕಟಪತಿಯ ಆಳ್ವಿಕೆಯ ಕಾಲದಲ್ಲಿ "ಹದಿನಾಡು ಸೀಮೆಯ ಪ್ರಭು ದೇವಪ್ಪಗ ಉಡರ ಮಖಳುಯಿಂಮಡಿ ರಾಮರಾಜನಾಯಕರು ಸಜ್ಜನಶುದ್ಧ ಸಿವಾಚಾರ ಸಂಪಂನರಾದ ದೇವಾಪೃಥ್ವಿ ಮಹಾಮಹತ್ತಿಹೊಳಗಾದ ಸುತ್ತೂರು ಸಿಂಹಾಸನಕ್ಕೆ ಕರ್ತರಾದ ಸಿವರಾತ್ರೆಯ ದೇವರ ಶಿಷ್ಯರು ಚನ್ನಬಸವರಾಜೆದೇವರಿಗೆ" ಹೊಂಗನೂರು ಸ್ಥಳಕ್ಕೆ ಸೇರಿದ ಹಸುರಹಳ್ಳಿಯನ್ನು ತಮ್ಮ ತಾಯಿ ಚೆನ್ನಾಜಿಯಮ್ಮನ ಪುಣ್ಯಾರ್ಥದಾನವಿತ್ತು ಸಂಗತಿಯು ಮೇಲುಮಾಳ ಶಾಸನದಲ್ಲಿ (ಚಾನ ೨೧೬) ನಿರೂಪಿತವಾಗಿದೆ. ಕ್ರಿ.ಶ. ೧೬ನೆಯ ಶತಮಾನದಲ್ಲಿ ವೀರಸೋಮರಾಯನು ಹುಲಿಯೂರು ಆರಾಧ್ಯವೊಡೆಯರಿಗೆ ಭಕ್ತಿಪೂರ್ವಕವಾಗಿ ಮಠಮಾಡಿಸಿ ಕೊಟ್ಟನು (ಚಾನ ೧೬೩)

ಭಾರತದ ಬಹುಪಾಲು ಶಾಸನಗಳು ವಾಸ್ತವವಾಗಿ ದಾನಶಾಸನಗಳು. ಸಂಸ್ಥೆಗಳಿಗೆ ಹಾಗೂ ವ್ಯಕ್ತಿಗಳಿಗೆ ಬೇರೆ ಬೇರೆ ಕಾರಣಗಳಿಗಾಗಿ ನೀಡಲಾದ ದಾನ ವಿಷಯವೇ ಶಾಸನಗಳ ಮೂಲದ್ರವ್ಯ. ದಾನಗಳ ಹಾಗೂ ವುಗಳ ಕಾರಣಗಳ ವೈವಿಧ್ಯ ಬೆರಗನ್ನು ಉಂಟುಮಾಡುತ್ತದೆ. ಚಾಮರಾಜನಗರ ತಾಲ್ಲೂಕಿನ ಕೆಲವು ಶಾಸನಗಳನ್ನು ಈ ದೃಷ್ಟಿಯಿಂದ ಸ್ಥೂಲವಾಗಿ ಸಮೀಕ್ಷಿಸಬಹುದು. ಕ್ರಿ.ಶ. ೮ನೆಯ ಶತಮಾನದ ಹೊಮ್ಮ ಶಾಸನದಲ್ಲಿ (೧೪೭) ಆ ಸ್ಥಳದ ವಿನಿತೀಶ್ವರದೇವರಿಗೆ ದೇವೇಂದ್ರ ತಮ್ಮಡಿ ಮತ್ತು ಮುದ್ದೆಗಣ ಭೂದಾನವಿತ್ತ ವಿಷಯವನ್ನು ಹೇಳಿದೆ. ಇವರ ದಾನವನ್ನು ಗೋಷ್ಠಿ ಧರ್ಮ್ಮಮ್ ಎಂದು ಕರೆಯಲಾಗಿದೆ. ಕ್ರಿ.ಶ. ೧೨೮೧ ರಲ್ಲಿ ಅರೆಕೊಠಾರದ ಸಮಸ್ತಗಳವುಡುಗಳ ಭುಜಂಗೇಶ್ವರ ದೇವರಿಗೆ ನೀರುಕೂಲಿ ನಿಚಂಡಿ ಹೊಂಬಳಿಬೆಡುಗೆ ಮನೆವಣ ಮುಂತಾದ ಕರಾದಾಯವನ್ನು ಬಿಟ್ಟರು ಇಚಾನ ೪) ಮರಹಳ್ಳಿಯ

ಮಲ್ಲಿಕಾರ್ಜುನ ದೇವರಿಗೆ ಕ್ರಿ.ಶ. ೧೨೨೧ ರಲ್ಲಿ ಹರಗವುಡನು ಗಾಣವೊಂದನ್ನು ದಾನವಿತ್ತ (ಚಾನ ೧೨೭) ಕ್ರಿ.ಶ. ೧೦-೧೧ನೆಯ ಶತಮಾನದಲ್ಲಿ ಚಾಮುಂಡಪುರದ ಕೆರೆಯ ಮೂಡಣತೂಬನ್ನು ದೇವರಿಗೆ ಬಿಡಲಾಯಿತು. (ಚಾನ ೧೨೩) ಕ್ರಿ.ಶ. ೧೫೩೧ರಲ್ಲಿ "ಕಾಶೀ ಕ್ಷೇತ್ರಕ್ಕೆ ಸಮಾನವಾದ ತಿರಮಕೊಡಲಿಗೆ ದಕ್ಷಿಣ ಭಾಗದ ಉಮ್ಮತ್ತೂರು ಗ್ರಾಮದ" ರಂಗನಾಥ ದೇವರ ಸೇವೆಗೆ ಭೂಮಿದಾನ ಮಾಡಲಾಯಿತು. (ಚಾನ೪೯) ಕಾಶಿಯಲ್ಲಿ "ವಿಶ್ವೇಶ್ವರ ಮೊದಲಾದ ದೇವತೆಗಳಿಗೆ ಅಭಿಷೇಕ ಪೂಜೆ ಸಹಸ್ರನಾಮ ದೀಪಾರಾಧನೆ ನೈವೇದ್ಯ ವಿಶೇಷಪರ್ವಾಚರಣ ಕಾರ್ತಿಕ ಮಾಘು ವೈಶಾಖ ಈ ಮಾಸತ್ರಯದಲ್ಲಿ ಸ್ನಾನಮಾನ ನಿತ್ಯದಲ್ಲಿ ನೂರು ಬ್ರಾಹ್ಮಣರಿಗೆ ಮೃಷ್ಟಾಂನ ಛತ್ರ ಕಾಶಿ ವಾಸಿಗಲಿಗೆ ವರ್ಷಾಶನ ಪ್ರಯಾಣೆಯಲ್ಲಿ ಮಾಘಸ್ನಾನ ಮುಂತಾದ ಹಲವು ಸೇವೆಗಳಿಗೆ ಕಂಠೀರವ ನರಸರಾಜನು ಹೊಂಗನೀರು ಸ್ಥಳವನ್ನು ದಾನ ನೀಡಿದ (ಚಾನ ೧೭೧) ಕ್ರಿ.ಶ. ೧೮ನೆಯ ಶತಮಾನದಲ್ಲಿ ಸುರಗಿಯ ಬಸವಣ್ಣವೊಡೆಯನು ಗೆಬ್ಬರೂರು ಮತ್ತು ಯೆಗಾಲೂರಿನ ಜಂಗಮರ ಆರೋಗಣೆ ನಿರ್ವಹಿಸಲು ಭೂದಾನ ಮಾಡಿದರು (ಚಾನ ೨೧೨) ಹೀಗೆಯೇ ತೆರಕಣಾಂಬಿಯ ವರದರಾಜ (ಚಾನ ೩೦೧) ಮತ್ತು ಗೋಪಿನಾಥ (ಚಾನ ೨೬೬) ಅಂಚವಾಡಿಬೆಟ್ಟದ ವೀರಭದ್ರ, ಕುಂಬೇಶ್ವರ ಹಾಗೂ ಬಸವೇಶ್ವರ (ಚಾನ ೨೪೬) ಚಾಮರಾಜನಗರ, ಗಾಜನೂರು, ಕುಲಗಾಣ, ಹಳೇ ಆಲೂರು ಮೊದಲಾದ ಸ್ಥಳಗಳಲ್ಲಿನ ದೇವರಿಗೆ ಭೂಮಿಕಾಣಿ, ಕರಾದಾಯ ಹಾಗೂ ಧನದಾನಗಳನ್ನು ನೀಡಿದುದನ್ನು ಈ ತಾಲ್ಲೂಕಿನ ಶಾಸನಗಳಿಂದ ತಿಳಿದುಕೊಳ್ಳಬಹುದು. ಹರದನಹಳ್ಳಿಯ ಛತ್ರದ ನಿರ್ವಹಣೆಗಾಗಿ ೧೬೭೬ ರಲ್ಲಿ ಮೈಸೂರು ದೇವರಾಜವೊಡೆಯ ಬೊಮ್ಮನಹಳ್ಳಿ ಗ್ರಾಮವನ್ನು ದಾನವಿತ್ತ ಸಂಗತಿ ವೆಂಕಟಯ್ಯನ ಛತ್ರ ಶಾಸನ (ಚಾನ ೨೪೯) ಹೇಳಿದೆ.

ವ್ಯಕ್ತಿಗಳಿಗೆ ನೀಡಲಾದ ದಾನಗಳೂ ವಿವಿಧ ಬಗೆಯವು ಯುದ್ದದಲ್ಲಿ ಹೋರಾಡಿ ಮಡಿದ ವೀರನಿಗೆ ಬಾಳ್ಗಳ್ಚು ಆಗಿ (ಚಾನ ೭೯) ಕ್ರಿ.ಶ. ೯೭೧-೭೨ 'ರಕ್ತ ಕೊಡಗೆ'ಯಾಗಿ (ಚಾನ ೭೫, ೧೬-೧೭ನೆಯ ಶತಮಾನ) ಅಥವಾ ನೆತ್ತರು ಕೊಡಿಗೆಯಾಗಿ (ಚಾನ ೭೫, ೧೬-೧೭ನೆಯ ಶತಮಾನ) ಅಥವಾ ನೆತ್ತರು ಕೊಡಿಗೆಯಾಗಿ (ಚಾನ ೨೫೬, ಕ್ರಿ.ಶ. ೧೩೮೦), ತನ್ನ ತಂದೆತಾಯಿಗಳಿಗೆ 'ತ್ರಿಸಂಧ್ಯಾ ಕಾಲದಲ್ಲೂ ಪುಣ್ಯವಾಗಬೇಕೆಂದು' (ಚೌನ ೨೨೯, ೧೫೬೩) ದಾನ ನೀಡಲಾಯಿತು. ಹೊಂಗನೂರಿನ ಒಂದು ಶಾಸನ (ಚಚಾನ ೧೪೯) ವಿಶಿಷ್ಟವಾದುದು. ಇದರ ಕಾಲ ಕ್ರಿ.ಶ. ೧೪೩೫ ಲಖಚಿಣ ಎಂಬ ವ್ಯಕ್ತಿಯು ತನ್ನ ಕುಟುಂಬಕ್ಕೆ 'ಅಡಿಗೆ ಮಾಡಿಯಿಕುವ'

ಬ್ರಾಹ್ಮಣನೊಬ್ಬನಿಗೆ ಒಂದು ಖಂಡುಗ ಗದ್ದೆಯನ್ನು ದಾನ ವಿತ್ತ. ಇಂಥ ಉದಾಹರಣೆಗಳು ಹಲವು ದಾನಗಳನ್ನು 'ಲಕ್ಷ್ಮೀ ನಾರಾಯಣಪ್ರೀತ್ಯರ್ಥವಾಗಿ' 'ಶಿವಾರ್ಪಿವಾಗಿ', ಅಥವಾ 'ವಿಶ್ವೇಶ್ವರರಾರ್ಪಣ ಬುದ್ಧಿ'ಯಿಂದ ನೀಡಲಾಗುತ್ತಿತ್ತು.

ಹಿಂದಿನ ಕಾಲದಲ್ಲಿ ಜನರು ಬೇರೆ ಬೇರೆ ಧರ್ಮಕ್ಕೆ ಸೇರಿದವರಾಗಿದ್ದರೂ ಸಾಮರಸ್ಯದಿಂದ ಬಾಳಿದರು. ಕ್ರಿ.ಶ. ೧೨೭೮ ರಲ್ಲಿ ಹಳೇ ಆಲೂರು ಶಾಸನದಲ್ಲಿ (ಚಾನ ೧೯೫) ವೇಳ, ಕೋವ, ಕುಣಿಂದ, ನಲ್ಲೊಡೆಯ ಮುಂತಾದ ವಿವಿಧ ವರ್ಗದ ಜನರು ಚಂದ್ರನಾಥ ಬಸದಿಯ ಜೀರ್ಣೋದ್ಧಾರ ಮಾಡಿದ ಉಲ್ಲೇಖವಿದೆ. ಕವಿ ಹಾಗೂ ಗಮಕಿ ಎಂದು ವರ್ಣಿತನಾದ ಮಲ್ಲಿ ಸೇನ ಮಲಧಾರಿಯ ಶಿಷ್ಯರಾದ ಆದಿಯಣ್ಣ ಮತ್ತು ಚೆಲುವಣ್ಣ, ಭೂದಾನ ಪಡೆದರು. ಸ್ವಾರಸ್ಯದ ಸಂಗತಿ ಎಂದರೆ ಶಿವ ಮತ್ತು ವಿಷ್ಣು ದೇವಾಲಯಗಳ ಸ್ಥಾನಪತಿಗಳು ಈ ದತ್ತಿಗೆ ಸಾಕ್ಷಿಗಳಾಗಿದ್ದುದು ಹಾಗೂ ಅದರ ರಕ್ಷಣೆಗೆ ಹೊಣೆಗಾರರಾಗಿದ್ದರು.

ಎಣ್ಣೆಗುಂಬ ಶಾಸನದ ಕಾಲ ಸುಮಾರು ಕ್ರಿ.ಶ. ೧೧೧೦ ಆಳುತ್ತಿದ್ದ ಅರಸ ಚೋಳ ಕುಲೋತ್ತುಂಗ (ಚಾನ ೩೦೩) ಈ ಶಾಸನವು ಹಲವು ತೆರಿಗೆಗಳನ್ನು ಹೆಸರಿಸುತ್ತದೆ. ಮಡ ಪರಿಯಾ, ಪುಲುವರಿ, ವೆಟ್ಟುವರಿ, ವೆಂಗುವರಿ ಇತ್ಯಾದಿ. ಪುಲುವರಿಯು ಗೋಮಾಳದ ತೆರಿಗೆ (ಕನ್ನಡ-ಕನ್ನಡ ನಿಘಂಟು, ಸಂಪುಟ ೬, ಪು. ೫೭೧) ವೆಟ್ಟುವರಿಯು ವಿಟ್ಟಿನ ಅಥವಾ ಬಿಟ್ಟಿಯೆಂದು ತೋರುತ್ತರದೆ. ಬಿಟ್ಟಿ ಎಂದರೆ ವೇತನ ರಹಿತ ಕೆಲಸ (ಕನ್ನಡ-ಕನ್ನಡ ನಿಘಂಟು ಸಂಪುಟ ೬, ಪುಟ ೬೪೪೪) ಒಟ್ಟಿನಲ್ಲಿ ಚಾಮರಾಜನಗರ ತಾಲ್ಲೂಕಿನ ಶಾಸನಗಳಲ್ಲಿ ಕಂಡು ಬರುವ ತೆರಿಗೆಗಳಲ್ಲಿ ಸಿದ್ಧಾಯ, ಮನೆವಣ, ನೀರುಕೂಲಿ, ಬಿನುಗುದೆರೆ, ಕಾವಲಿಯ ಸುಂಕ, ಬಿಟ್ಟಿ, ಬಿಡಾರ, ಸೊಲ್ಲಗೆ, ಮಲಿಗೆ, ನಿಚಂಡಿ, ಮಂಡೆಗದ್ದಾಣ, ಮುಂತಾದ ಹಲವು ಬಗೆಯ ತೆರಿಗೆಗಳು ಸೇರಿವೆ. ಹಾಗೆಯೇ ಸಲಗ, ಖಂಡುಗ, ಗುಳಿ, ಕೊಳಗ, ಮಾನ ಕಮ್ಮ, ಅಥವಾ ಕಂಬ, ಮಾರು ಮುಂತಾದ ಹಲವು ಬಗೆಯ ತೆರಿಗೆಗಳು ಸೇರಿವೆ. ಹಾಗೆಯೇ ಸಲಗ, ಖಂಡುಗ, ಗುಳಿ, ಕೊಳಗ, ಮಾನ ಕಮ್ಮ, ಅಥವಾ ಕಂಬ, ಮಾರು ಮುಂತಾದ ಅಳತೆಗಳೂ ಹಾಗ, ಪಣ, ಗದ್ಯಾಣ, ಕಂಠೀರಾಯಿಗಳಿಗೆ, ಬೇಳೆ, ಕಾಸು ಮುಂತಾದ ನಾಣ್ಯಗಳೂ ಕೆಬ್ಬೆ, ಎರೆಯಮಣ್ಣು, ನೀರ್ಮಣ್ಣು ಇತ್ಯಾದಿ ಮಣ್ಣ ಬಗೆಗಳೂ ಶಾಸನಗಳಲ್ಲಿ ಉಕ್ತವಾಗಿರುವುದನ್ನು ಗಮನಿಸ ಬಹುದು.

ಕೆಲವು ರೀತಿಯ ಧಾರ್ಮಿಕ ನಂಬಿಕೆಗಳೂ ಶಾಸನಗಳಲ್ಲಿ ನಿರೂಪಿತವಾಗಿರುವುದನ್ನು ಗಮನಿಸಬಹುದು. ವೀರನೊಬ್ಬ ಮರತನಾದಾಗ ಆತನ ಮಗ ನಿಕಗಾವುಂಡ ತಮ್ಮಯ್ಯಂಗೆ ಶೇಷಕ್ರಿಯಂಗೆಯ್ದು 'ಕಲ್ಲನ್ನು ನಿಲ್ಲಿಸಿದ ವಿಷಯ ಬಾಗಳಿ ಶಾಸನದಲ್ಲಿದೆ. (ಚಾನ ೧೧೭, ೧೧೪೨). ಕ್ರಿ.ಶ. ೧೬೭೫ ರಲ್ಲಿ ಚಿಕ್ಕದೇವರಾಜವೊಡೆಯ ತನ್ನ ತಂದೆಗೆ ಗಯಾ ಕ್ಷೇತ್ರದಲ್ಲಿ ಶ್ರಾದ್ಧ ಮಾಡಿಸಿದನು (ಚಾನ ೧೧).

ಹರದನಹಳ್ಳಿಯ ದಿವ್ಯಲಿಂಗೇಶ್ವರನ ಸನ್ನಿದಿಯಲ್ಲಿ ನ್ಯಾಯ ವಿಚಾರಣೆಯೊಂದು ನಡೆಯಿತು. ಕುಂಬಾರರಿಗೆ ಕಾಲುಗುರು ಮೆಲು ಕಟ್ಟುಗಳ ಹಕ್ಕಿಲ್ಲವೆಂದು ನಾವಿದರು ಮತ್ತು ಅರಸರು ವಾದಿಸಿದಾಗ ಕುಂಬಾರಸೆಟ್ಟಿಗಳು ದೇವರ ಸನ್ನಿದಿಯಲ್ಲಿ ಬಿಸಿತುಪ್ಪದಲ್ಲಿ ಕೈ ಅದ್ದುವ "ದಿವ್ಯ"ದಲ್ಲಿ ಪಾಲ್ಗೊಂಡು ಗೆದ್ದರು (ಯಳಂದೂರು-೨) ಅಮಾನುಷವೆನ್ನಿಸಿದರೂ ಇಂಥ ದಿವ್ಯ ಪದ್ಧತಿ ಈ ಪ್ರದೇಶದಲ್ಲಿಯೂ ಪ್ರಚಲಿತವಾಗಿತ್ತು.

ಕ್ರಿ.ಶ. ೧೫೪೦ ರ ಹೊಂಡರಬಾಳು ಶಾಸನವು (ಚಾನ ೨೪೨) ಈ ಪ್ರದೇಶದಲ್ಲಿ ಉಂಟಾದ ತೀವ್ರ ಕ್ಷಾಮದ ಚಿತ್ರಣವನ್ನು ನೀಡುತ್ತೆ. ಪ್ರಾಯಶಃ ಒಂದು ಹಣಕ್ಕೆ ಏಳು ಮಾನ ಧಾನ್ಯ ಸಿಗುತ್ತಿತ್ತೆಂದು ತೋರುತ್ತದೆ. "ಹಣ ೧ಕ್ಕೆ ೭ ಮಾನ ಮನುಶಮನುಶರ ತಿಂದರು" ಎಂಬ ಪುಟ್ಟ ಮಾತಿನಲ್ಲಿರುವ ಬರದ ತೀವ್ರತೆಯನ್ನು ನಮ್ಮ ಮನಸ್ಸನ್ನು ತಟ್ಟುತ್ತದೆ.

ಕ್ರಿ.ಶ. ೧೫೪೯ರ ಹೊಂಗನೂರು ಶಾಸನದಲ್ಲಿ (ಚಾನ ೧೬೧) ಭೂಮಿ ಸಾಗುವಳಿಗೆ ಸಂಬಂಧಿಸಿದಂತೆ ಕೆಲವು ನಿಂಬಧನೆಗಳನ್ನು ಸೂಚಿಸಿದೆ. ಸ್ಥಳೀಯರನ್ನು ಹೊರತುಪಡಿಸಿ ಬೇರೆ ಯಾರಾದರೂ ವ್ಯವಸಾಯ ಮಾಡಬೇಕಾದರೆ ಮಾಗಣಿಕಾರ, ಪಾರುಪತ್ಯಗಾರ ಅಥವಾ ಗೌಡಸೇನಬೋವರಿಂದ ಪಟ್ಟೆ (ಅನುಮತಿ ಪತ್ರ) ಪಡೆದುಕೊಳ್ಳಬೇಕಿತ್ತು ಹಾಗೂ ವಿಧಿಸಿದ ನಿಬಂಧನೆಗಳಿಗೆ ಅನುಗುಣವಾಗಿ ಕೃಷಿ ಕೆಲಸ ಮಾಡಬೇಕಿತ್ತು. ಅನಧಿಕೃತ ಸಾಗುವಳಿಯನ್ನು ತಪ್ಪಿಸಲೂ ಕ್ರಮ ಕೈಗೊಳ್ಳಲಾಗಿತ್ತು.

ಕ್ರಿ.ಶ. ೧೬ನೆಯ ಶತಮಾನದಲ್ಲಿ ತಮ್ಮಣ್ಣನಾಯಕ ಎಂಬ ಅಧಿಕಾರಿಯು ಭೂಮಿಯನ್ನು ಗುತ್ತಿಗೆಯಾಗಿ ಪಡೆದ ಆದರೆ ಹಚಿನಾಡ ರಾಜರಾಜನಾಯಕನಿಗೆ ಆತ ನಿರ್ದಿಷ್ಟ ಮೊತ್ತದ ವಾರ್ಷಿಕ ಕಂದಾಯ ಸಲ್ಲಿಸಬೇಕಿತ್ತು. ದುರ್ದೈವದಿಂದ ಈ ಶಾಸನದ (ಚಾನ ೧೫೨) ವಿವರಗಳು ದೊರೆಯುವುದಿಲ್ಲ.

ಬಾಗಳಿ ಭುಜಂಗೇಶ್ವರ ದೇವಾಲಯದ ಅರ್ಚಕ ಕೊಚಿಭಟಾರಕನಿಗೆ ಕೊಟ್ಟ ದತ್ತಿಯನ್ನು ಕ್ರಿ.ಶ. ೧೦ನೆಯ ಶತಮಾನದ ಶಾಸನ (ಚಾನ ೧೧೪) ಉಲ್ಲೇಖಿಸುತ್ತದೆ. ಈತ ನೀರ್ಗುಂದದ ಗೊರವನೆಂದು ಮತ್ತು ಮೊದಲು ಬಾರಿಗೆ ದಾನಿಗಳಿಂದ ನೇಮಿತನಾದವನೆಂದು ಶಾಸನವು ಸಾರುತ್ತದೆ. ಈತ ದೇವಾಲಯದ ಆಡಳಿತ ನಿರ್ವಹಣೆಯನ್ನು ನೋಡಿ ಕೊಳ್ಳಬೇಕಿತ್ತದೆ, ಹತ್ತು ಮಂದಿ ಪಾತ್ರದವರ ಯೋಗ ಕ್ಷೇಮದ ಜವಾಬ್ದಾರಿಯನ್ನು ವಹಿಸಬೇಕಿತ್ತು. ಸುಮಾರು ೧೨-೧೩ ನೆಯ ಶತಮಾನದ ಸಿಂಗಪುರ ಶಾಸನವು (ಚಾನ ೧೪೨) ನಂಬಿ, ಪಾರಿಚಾರಕ, , ಗಣಿಕ, ಹನವಡೆಗ, ವಾದ್ಯವಾದಕ, ಪಾತ್ರದವರು ಮುಂತಾದವರನ್ನು ಉಲ್ಲೇಖಿಸುವುದರಿಂದ ಆ ಕಾಲದ ದೇವಾಲಯವು ಆರ್ಥಿಕ, ಸಾಮಾಜಿಕ ಹಾಗೂ ದಾರ್ಮಿಕ ಅಂಶಗಳನ್ನೊಳಗೊಂಡ ಒಂದು ಸಂಕೀರ್ಣ ಸಂಸ್ಥೆಯಾಗಿತ್ತೆಂದು ತಿಳಿಸುತ್ತದೆ.

**ಸ್ಥಳನಾಮಗಳು :** ಚಾಮರಾಜನಗರ ತಾಲ್ಲೂಕಿನ ಹಲವು ಗ್ರಾಮಗಳ ಮೂಲ ಹೆಸರಿನ ಸ್ವರೂಪ ನಮಗೆ ಶಾಸನಗಳಿಂದ ತಿಳಿದುಬರುತ್ತದೆ. ಎಷ್ಟೋ ಹಳ್ಳಿಗಳಿಗೆ ಸಾವಿರವರ್ಷಕ್ಕೂ ಮೀರಿದ ಪ್ರಾಚೀನತೆ ಇದೆ. ಉದಾಹರಣೆಗೆ ಕ್ರಿ.ಶ. ೮-೯ ನೇಯ ಶತಮಾನದ ಶಾಸನೋಕ್ತ ಅಮಚವಾಡಿ ಈಗಿನ ಅಂಚವಾಡಿ (ಚಾನ ೨೫೬) ತುಸು ಅನಂತರ ಕಾಲದ ಮಾದವಾಡಿ ಈಗಿನ ಮೊದಲವಾಡಿ (ಚಾನ ೨೩೭) ಈಗಿನ ಹರದನಹಳ್ಳಿಯ ಪ್ರಾಚೀನ ಹೆಸರು ಮಗೆಯ ಅಥವಾ ಮರ್ಗೈಯ (ಚಾನ ೨೭೫) ಇದು ಮಾಧವದಣ್ಣಾಯಕರ ಜನ್ಮ ಸ್ಥಳವಾಗಿತ್ತು. (ಚಾನ ೨೭೫, ಇತ್ಯಾದಿ) ಈ ಗ್ರಾಮ ದಕ್ಷಿಣ ವಾರಣಾಸಿಯೆಂದು ಪ್ರಖ್ಯಾತಿ ಪಡೆದಿತ್ತು (ಚಾನ ೨೬೧, ಕ್ರಿ.ಶ. ೧೫೪೭) ಇಲ್ಲಿನ ಒಂದು ಶಾಸನದಲ್ಲಿ (ಚಾನ ೨೬೦, ಕ್ರಿ.ಶ. ೧೩೬೮) "ಯೆಂಣೆನಾಡೊಳಗೆ ಪುಣ್ಯ ಕ್ಷೇತ್ರ ದಕ್ಷಿಣ ದೇಶ ಪಾವನೀಕ್ರುತಮಪ್ಪ ಹರದನಹಳ್ಳಿ" ಎಂಬ ಉಲ್ಲೇಖವಿದೆ. ಈಗೀನ ಚಾಮರಾಜನಗರ ಅರೆಕೊಠಾರ, ಅರೆಕುಠಾರ, ಅರೆಕೊಟ್ಟರಾ, ಅರುಕಠಾರ ಎಂಬ ಹೆಸರಿತ್ತೆಂದು ತಿಳಿದು ಬರುತ್ತದೆ. ಈಗಿನ ಹೆಸರನ್ನೂ ಕಂಸದೊಳಗೆ ಅವಕ್ಕೆ ಹಿಂದೆ ಇದ ಹೆಸರಗಳನ್ನೂ ಹೀಗೆ ಸೂಚಿಸಬಹುದು : ಕುದೇರು (ಕುದಿಹೆರು, ಕುದಿಹೇರು, ಕುದುಂಯೆರು) ಚಾನ ೭೨, ೭೩, ೭೭, ೧೫-೧೬ನೆಯ ಶತಮಾನ, ಎಲ್ಲೂರು (ಎಲವಕ್ಕಲೂರು) ಚಾನ ೮೦-೮೧ ಕ್ರಿ.ಶ. ೮ನೆಯ ಶತಮಾನ ಎಲವಕೂರು, ಚಾನ ೭೯, ಕ್ರಿ.ಶ. ೯೭೧-೭೨ ಮತ್ತು ಚಾನ ೭೮, ಕ್ರಿ.ಶ, ೧೨೮೧); ಬಾಗಳಿ (ಬಾಜಿಜಿಯೂರು, ಚಾನ ೧೧೪, ಕ್ರಿ.ಶ. ೧೦ನೆಯ ಶತಮಾನ) ತೆಳನೂರು (ತೆನಳನೂರು, ಚಾನ ೧೨೩, ಕ್ರಿ.ಶ. ೧೦-೧೧ನೆಯ ಶತಮಾನ) ಬಸವಟ್ಟಿ (ಭಸಟ್ಟಿ,

ಚಾನ ೧೨೭, ಕ್ರಿ.ಶ. ೧೨೨೧) ಎಡೂರು (ಎಡೆಯೂರು, ಚಾನ ೧೨೭, ಇಡ್ಡೈಯೂರು, ಚಾನ ೧೨೮, ೧೪ನೆಯ ಶತಮಾನ) ಹರಳಕೋಟೆ (ಹಟ್ಟಲಕೋಟೆ, ಚಾನ ೨೨೧, ೧೪ನೆಯ ಶತಮಾನ) ಇತ್ಯಾದಿ. ಉಮ್ಮತ್ತೂರಿಗೆ ಧತ್ತೂರಾಖ್ಯಪುರ ಎಂಬ ಹೆಸರಿತ್ತು. (ಚಾನ ೧೦೪, ಕ್ರಿ.ಶ. ೧೪೧೩); ಇದು ಕಾವೇರಿ ನದಿಗೆ ದಕ್ಷಿಣದಲ್ಲಿ ಒಂದು ಯೋಜನೆ ದೂರವಿತ್ತು. ಆಲೂರು ಸಂಸ್ಥಾನವು ತೆಂಕಣ ಐಯಾವೊಳೆ ಎಂಬ ಪ್ರಖ್ಯಾತವಾಗಿತ್ತು. (ಚಾನ ೧೮೪, ಕ್ರಿ.ಶ. ೧೪೦೩) ಒಂದು ಶಾಸನದಲ್ಲಿ (ಚಾನ ೨೧೦, ಕ್ರಿ.ಶ. ೧೫ನೆಯ ಶತಮಾನ) "ಚಂದವಾಡಿನಲು ಪಾರ್ವತಿರಾಯವೊಡೆಯರ ಹೆಸರಲ್ಲು ಪುರವ ಕಟ್ಟಿದ" ಉಲ್ಲೇಖವಿದೆ. ಇದು ಈಗಿನ ರಾಂಪುರ ವಿರಬಹುದು. ಹೊಮ್ಮ ಇನ್ನೊಂದು ಪ್ರಾಚೀನ ಗ್ರಾಮ ಕ್ರಿ.ಶ. ೮ನೆಯ ಶತಮಾನದಲ್ಲಿ ಇದಕ್ಕೆ ಪೊಮ್ಮಿ (ಚಾನ ೧೪೭) ಎಂಬ ಹೆಸರಿತ್ತು. ಮುಂದೆ ಕ್ರಿ.ಶ. ೧೩೮೦ ರಲ್ಲಿ ಇದು ಸರ್ವಜ್ಞ ವಿಷ್ಣುಪುರವಾಗಿ ಅಕಳಂಕ ಚತುರ್ವೇದಿಮಂಗಲವೆಂಬ ಹೆಸರಿತ್ತು. (ಚಾನ ೧೪೮) ಹರಳುಕೋಟೆಗೆ ಕೇರಳಾಂತರ ಚತುರ್ವೇಮಂಗಲವೆಂಬ ಹೆಸರಿತ್ತು. (ಚಾನ ೨೨೨, ಕ್ರಿ.ಶ. ೧೧೬೭) ಹೊಂಗನೂರಿಗೆ ಹೊಂಗ ಅಘ್ರಾರ (ಚಾನ ೧೬೮, ಕ್ರಿ.ಶ. ೧೧ನೆಯ ಶತಮಾನ) ಮಸಣಹಳ್ಳಿ ಈಗಿನ ಬೂದಿಪಡಗ, ಈಗಿನ ಕೆರೆಹಳ್ಳಿಯ ಮೂಲ ಹೆಸರು ಪ್ರಾಯಶಃ ಶಿವಯ್ಯ ಕೆಜಿ (ಚಾನ ೩೫೨, ಕ್ರಿ.ಶ. ೯-೧೦ ನೆಯ ಶತಮಾನ) ಜೈನ ಕೇಂದ್ರವಾಗಿದ್ದ ಮಲೆಯೂರಿಗೆ ಕನಕಗಿರಿ, ಕನಕಾಚಲ ಎಂಬ ಹೆಸರಿತ್ತು. ಈಗಿನ ವೆಂಟಕಟಯ್ಯನ ಛತ್ರವು ಶ್ರೀನಿವಾಸಪುರ ಅಥವಾ ಶ್ರೀನಿವಾಸಕ್ಷೇತ್ರ ಎಂದೂ ಪರಿಚಿತವಾಗಿತ್ತು. (ಚಾನ ೧೬೮, ಕ್ರಿ.ಶ. ೧೧ನೆಯ ಶತಮಾನ) ಹರದನ ಹಳ್ಳಿಯ ಸಂಸ್ಕೃತ ರೂಪ ವಾಣಿಜ್ಯಪುರಿ (ಚಾನ ೨೯೨, ಕ್ರಿ.ಶ. ೧೩೪೫) ಹೆಗ್ಗವಾಡಿಯ ತಮಿಳು ರೂಪಾಂತರ ಪರ್ಗೈಪಾಡಿ ಎಣ್ಣೆಗುಂಬವು ಎರು ಮೈಕುಂಬ.

ಚಾಮರಾಜನಗರ ತಾಲ್ಲೂಕಿನ ಶಾಸನೋಕ್ತ ಆಡಳಿತ ಘಟಕಗಳು ಹಲವು ಇವು ಸೀಮೆ, ನಡು, ಎಳಿತ, ರಾಜ್ಯ ಮುಂತಾದ ಹೆಸರುಗಳಲ್ಲಿ ಉಲ್ಲೇಖಗೊಂಡಿವೆ. ಅವುಗಳಲ್ಲಿ ಕೆಲವು ಇವು; ತೆರಕಣಾಂಬಿ ರಾಜ್ಯ, ಮಾರನಾಡು, ಕಾರೆನಾಡು, ಉಡುವಂಕನಾಡು, ಕೈಯರನಾಡು, ಪಕಳಿನಾಡು, ಹಿರಿಯನಾಡು, ಅಥವಾ ಪೆರಿಯನಾಡು, ಅಣ್ಣೆನಾಡು, ಉಮ್ಮತ್ತೂರು ನಾಡು, ತಾಯೂರು ನಾಡು, ಎಡೆನಾಡಿಪ್ಪತು, ಪುನ್ನಾಡು, ಆರು ಸಾವಿರ, ಹದಿನಾಡು, ತೊರೆನಾಡು, ವೆಳ್ಳಪ್ಪನಾಡು, ಮುಡಿಗೊಂಡ, ಚೋಳಮಂಡಲ, ಕೇರಳಾಂತಕ, ವಳನಾಡು, ಮಂಗಲದ ಆರು ಸಾವಿರ ಸೀಮೆ, ಮೂಗೂರು ಸೀಮೆ, ಹೊಂಗನೂರು ಸ್ಥಳ, ಹರದನಹಳ್ಳಿ ಸ್ಥಳ ಇತ್ಯಾದಿ

**ವ್ಯಕ್ತಿ ನಾಮಗಳು :** ಈ ತಾಲ್ಲೂಕಿನಲ್ಲಿ ಶಾಸನೋಕ್ತ ಹೆಸರುಗಳಲ್ಲಿ ಕೆಲವು ವಿಶಿಷ್ಟವಾಗಿ ತೋರುತ್ತವೆ. ಅಂಥ ಕೆಲವು ಹೆಸರುಗಳು ಹೀಗವೆ, ಬರ್ದೆಯಯ್ಯ, ಕೊಲ್ಲನಾಯಕ, ಚಂಣ, ಭಂಕರಸಯ್ಯ, ಕಾಲಾಂತರವೊಡೆಯ, ಭಲ್ಲಪ, ನಿಂಡಗುಡ, ಕಹಿಗುಡ, ಕೊಂಮಾವಯ್ಯ, ಅಸಕ್ಕಗಾವುಂಡ, ಕೊಡಿಯೊಂಡೆ, ಹಾರುವಗೌಡ, ಕಚ್ಚಾಗನಿರ್ಗುನ್ನದೇವ, ಬನ್ನಿಯಮ್ಮ ಸೆಟ್ಟಿ, ಕೊಂಗುಳಿ ಅಚಾರಿ, ಮೋಟಗವುಡ, ಕತ್ತಿನಾಯಕ, ಜಡೆಯೂರು ಮುದಲಿಯೂರು, ಜವಣಯ್ಯ, ಇತ್ಯಾದಿ ಭಟ್ಟಾಕಳಂಕ ಮುನಿಷ, ಮುನಿಚಂದ್ರದೇವ, ಲಲಿತಕೀರ್ತಿಭಟ್ಟಾರಕ ಮುಂತಾದ ಅನೇಕ ಜೈನ ಗುರುಗಳ ಹೆಸರು ನಮಗೆ ಕಾಣಸಿಗುತ್ತದೆ. ಏಕಾಂತದ ರಾಮಯ್ಯನ ವಂಶಜನಾದ ಏಕಾಂತದ ಬಸವೇಶ್ವರ ದೇವ ಮುಂತಾದ ವೀರಶೈವ ಗುರುಗಳೂ ಈ ತಾಲ್ಲೂಕಿನ ಶಾಸನಗಳಲ್ಲಿ ಉಲ್ಲೇಖಿತರಾಗಿದ್ದಾರೆ.

ಕೆಲವು ಅಧಿಕಾರಿಗಳನ್ನು ಇಲ್ಲಿ ಗಮನಿಸಬಹುದು ನೊಲಂಬವ ಪೆರ್ಗಡೆಯಾಗಿದ್ದ ತ್ರಿಭವನಯ್ಯ ಸಿವಯ್ಯನ ಕೆರೆಯನ್ನು ಪಾಲಿಸುತ್ತಿದ್ದ (ಚಾನ ೩೫೨ ೯-೧೦ನೆಯ ಶತಮಾನ) ಕ್ರಿ.ಶ. ೧೫೧೮ ರಲ್ಲಿ ಗೋವಿಂದ ರಾಜನ ಕಾರ್ಯಕರ್ತನಾಗಿದ್ದ ತಿಮ್ಮನಾಯಕ ನವಿಲೂರನ್ನು ಆಳುತ್ತಿದ್ದ ಇತರ ಅಧಿಕಾರಿಗಳೆಂದರೆ ಪೆರುಮಾಳ ಅದಿಕಾರಿ, ಬಿಲಬೊಕ್ಕಯ್ಯ ದಣ್ಣಾಯಕ, ಮಹಾಪ್ರಧಾನಿ ಸಿದ್ದಯ್ಯ ರಾವುತ, ದಳವಾಯಿ ರಂಗನಾಯ, ಸಂಧಿವಿಗ್ರಹಿ ಪುಣಿಸಮಯ್ಯ, ಕಂಪಮಂತ್ರಿ, ಸೇನಬೋವ ಜವಣಯ್ಯ, ಪ್ರಧಾನಿ ಬಾಚರಸ, ಸಾಳುವ ಗೋವಿಂದರಾಜೊಡೆಯ ಇತ್ಯಾದಿ.

ಜೀವನವನ್ನು ಕ್ಷಣಿಕ ಎಂದು (ಕ್ಷಣವಿಧ್ವಂಸಿನೀಕಾಯ) ನಮ್ಮ ಪೂರ್ವಿಕರು ಭಾವಿಸಿದುದು ಸುವಿದಿತ. ಜೈನಗುರುಗಳು ಮರಣವನ್ನು ಸ್ವೀಕರಿಸುತ್ತಿದ್ದ ರೀತಿ ವೀರರೂ ಅವರ ಪತ್ನಿಯರೂ ಸಾವನ್ನು ಸ್ವೀಕರಿಸಿದ ಬಗೆ ಈ ಅಂಶವನ್ನು ಸಾಬೀತುಪಡಿಸುತ್ತವೆ. ಕ್ರಿ.ಶ. ೧೦-೧೧ನೆಯ ಶತಮಾನದಲ್ಲಿ ಕೊಂಡ ಕುಂದಾನ್ವಯದ ಗುಣನಂದಿ ಕರ್ಮಪ್ರಕೃತಿ ಭಟಾರರು ಮೂವತ್ತೊಂದು ದಿನ ಸನ್ಯಸನ ವ್ರತ ಹಿಡಿದು ಮೃತರಾದರು (ಚಾನ ೧೩೭) ಹಾಗೆಯೇ ನಾಗಯ್ಯ (ಚಾನ ೯೮) ಹೆಸರು ನಷ್ಟವಾಗಿರುವ ಜೈನಭಟಾರರು (ಚಾನ ೯೯, ೧೦೧) ಸೋಮಾಯಿ (ಚಾನ ೩೮೯ ಕ್ರಿ.ಶ. ೧೪೮೬) ಮುಂತಾದವರು ವ್ರತ ಹಿಡಿದು ಮುಡಿಪಿದವರು. ಕ್ರಿ.ಶ. ೯-೧೦ನೆಯ ಶತಮಾನದಲ್ಲಿ ನಡೆದ ಕಾದಾಟವೊಂದರಲ್ಲಿ ಬೂತರಸ ಸ್ವರ್ಗಸ್ಥನಾದ (ಚಾನ ೨೩೭) ಕ್ರಿ.ಶ. ೧೩೮೦ರಲ್ಲಿ ಕ್ಷೌರಿಕ ವೃತ್ತಿಯ ಮಂಚೆ (ಚಾನ ೨೫೨) ಮುಂತಾದವರು ಕಾದಿ ಮರಣ

ಹೊಂದಿದರು. ಕ್ರಿ.ಶ. ೧೪೨೮ ಬಾಗಳಿ ಶಾಸನದಲ್ಲಿ (ಚಾನ ೧೦೭) ವೀರನೊಬ್ಬನ (ಆತನ ಹೆಸರು ಸ್ಪಷ್ಟವಿಲ್ಲ; ಆದರೆ ಒಮ್ಮ ಗಾವುಂಡನ ಮಗ) ಉಲ್ಲೇಖವಿದೆ. ಆತ "ಎಡೆನಾಡ ಹಿರಿಯನಾಡ ಬೆಸದಿಂದ ನೀಲಗಿರಿಯ ಕೋಟೆ ಸಿಖರದ ಮೇಗಣ ಕೊಳ್ಳಲ್ಲಕೋಟೆ" ಯನ್ನು ಮುತ್ತಿ ಕೋಟೆಯನ್ನು ಸುಟ್ಟು, ಕೋಟೆಯ ನಾಯಕನ ಮಗನನ್ನು ಕೊಂದು "ಮತ್ತಿದಿರಾಂತರಿಬಲಮಂಕೂಡಾಡಿ ಕಂದು ರಸಸೂರತೆಯಿಂದ ಬಣ್ಣನಾಗಿ ಸ್ವರ್ಗಸ್ತನಾದ".

ಸಹಗಮನದ ಉಲ್ಲೇಖಗಳು ವಿರಳವಾದರೂ ಕಂಡು ಬರುತ್ತವೆ. ಕ್ರಿ.ಶ. ೧೬ನೆಯ ಶತಮಾನದಲ್ಲಿ ಗುಳಿಗನ ಮದವಳಿಗೆ ಸತಿಯಾದಳು (ಚಾನನ ೭೦) ಆಕೆಯ ಪತಿ ಹಾಗೂ ಮಾವನ ಹೆಸರನ್ನು ಹೇಳುವ ಶಾಸನದಲ್ಲಿ 'ಸತಿ'ಯಾದ ಸಾಧ್ವಿಯ ಹೆಸರೇ ಇಲ್ಲದಿರುವುದು ಒಂದು ಕೊರತೆ. "ದೇವಣ್ಣ ಮೂಕವ್ವೆಯರಿಗೆ ಅರಿಕುತಾರದ ಮಲಗಿಡ್ಡಗ ಉಡರಯರವರು ನಿಲಿಸಿದ ವೀರಗಲ್ಲು" ಎಂಬ ತೊಣ್ಣೂರು ಶಾಸನ ಪಾಠದಲ್ಲಿಯೇ (ಚಾನ ೨೧೫) ಸಹಗಮನದ ವಿಷಯವೂ ಅಂತರ್ಗತವಾಗಿದೆ. ವೀರಬಲ್ಲಾಳನ ಕಾಲದಲ್ಲಿ ಸಂಭವಿಸಿದ ತುರುಗಾಳಗದಲ್ಲಿ ಮಲೆಯೂರು ವೀರಪದೇವ ಹೋರಾಡಿ ಮೃತನಾದಾಗ ಆತನ ಹೆಂಡತಿಯೂ ಮಹಾಸತಿಯಾದಳು (ಚಾನ ೨೨೬)

**ಭಾಷಿಕ–ಸಾಹಿತ್ಯಕ ಅಂಶಗಳು** : ಮೊದಮೊದಲು ಸರಳಭಾಷೆ ಹಾಗೂ ನೇರ ನಿರೂಪಣೆಯನ್ನು ಹೊಂದಿದ್ದಶಾಸನಗಳು ಕಾಲಕ್ರಮೇಣ ಅಡಂಬರ–ಅಲಂಕಾರದ ಭಾಷೆ ಮತ್ತು ಸಂಕೀರ್ಣ ನಿರೂಪಣೆಯತ್ತ ವಾಲಿದವು. ಕ್ರಿ.ಶ. ೧೧ನೆಯ ಶತಮಾನದ ಆದಿ ಭಾಗದಲ್ಲೇ ನಾವು ಕಾಣುವ ಭಾಷೆ ಇದು : "ಶ್ರೀ ಗೋಬಿನ್ದರದೇವನ ಮನೋಅನಯನ ವಲ್ಲಭೆ, ನೋಉಂಬ ವಂಶೋದ್ಭವೆ ಪಲ್ಲವ ಕುಲಿತಿಲಕೆ ಸಮ್ಯಕ್ತ ರೋಹಿಣಿ ಕಲಿಕಾಲ ರುಗ್ಮಿಣಿ ಪತಿವ್ರ, ಮಹೀನುತೆ ಧರ್ಮ ಚಿನ್ತಾಮಣಿ ಸತ್ಯವಿಳಾಸಿನಿ ತ್ರಿಭವನವೀರ ನೋಳುಬಾಗ್ರಜನೆಯಪ್ಪ ಶ್ರೀ ಪ್ರಿಥುವಬ್ಬರಸಿಯರು" ಎಷ್ಟೋ ಶಾಸನಗಳಲ್ಲಿ ಶಬ್ದಗಳು ವಿಕೃತಗೊಂಡಿವೆ. ತೊಹಿಮಾಸ ರಹಮೇಶ್ವರ, ವಯ್ಯ, ಪ್ರೋಹಿತ (ಪುರೋಹಿತ), ಪುಟ್ಟಿರಾಜ್ಯ (ಪೃಥ್ವೀರಾಜ್ಯ) ಇತ್ಯಾದಿ. ಕ್ರಿ.ಶ. ೧೬ನೆಯ ಶತಮಾನದ ನಾಗವಲ್ಲಿಯ ವರ್ಣನೆ ಇದು: "ಕನಕ ದೇಶದಿಂ ಮೇಣಿವ ಹೊಂನಹೊಳೆಯ ಸೀಮೆಯಲು ವೊಪ್ಪಿ ಶಿವಭಕ್ತಿಗೆ ಕಲ್ಯಾಣವೆನಿಸಿದ ನಾಗವಲ್ಲಿ "(ಚಾನ ೨೦೬) ಕ್ರಿ.ಶ. ೧೩೮೦ರ ಹೊಮ್ಮಶಾಸನವು (ಚಾನ ೧೪೮) ಆ ಗ್ರಾಮವನ್ನು ವರ್ಣಿಸುವುದು ಹೀಗೆ:

ಈ ಹೊಮ್ಮ ಗ್ರಾಮದ ಬ್ರಾಹ್ಮಣರು ಸರ್ವ ವಿದ್ಯಾ ಪಾರಂಗತರಾಗಿದ್ದರು. ಎಷ್ಟೋ ಶಾಸನಪಾಠಗಳಲ್ಲಿ ಸುಂದರ ವರ್ಣನೆ ಕಂಡುಬರುವಂತೆಯೇ ಸುಸಂಸ್ಕೃತವಲ್ಲದ, ವಿಶೇಷವಾಗಿ ಶಾಪವಾಕ್ಯಭಾಗಗಳಲ್ಲಿ ಮಾತುಗಳೂ ಕಂಡು ಬರುವುದುಂಟು. ಅಪಸಂಸ್ಕೃತಿಯೂ ಸಂಸ್ಕೃತಿಯ ಒಂದು ಭಾಗವಷ್ಟೆ। ಕ್ರಿ.ಶ. ೮ನೆಯ ಶತಮಾನದಲ್ಲಿ "ಇದನಚಿ ದೊಅಬಾರ್ಣಾಸಿಯುಂ ಕವಿಲೆಯಮನಚೆದೊಂ ಎಂಬ (ಚಾನ ೮೧) ಸರಳಮಾತು ಕಾಲ ಕ್ರಮೇಣ ರೂಕ್ಷವಾಗುತ್ತ ಹೋಯಿತು. ಪಾಲಿಸದಿದ್ದವರು "ತಮ್ಮ ತಾಯಿಗೆ ತಪಿದವರು" (ಚಾನ ೧೬೧, ಕ್ರಿ.ಶ. ೧೫೪೯) ಎಂಬಲ್ಲಾಗಲಿ ತಪ್ಪಿದವರು "ಸತ್ತ ಕತ್ತೆಯ ತಿಂದು ತೊರಳೆಯ ನೀರ ಕುಡಿದು ಹೋಗವರು" ಎಂಬಲ್ಲಾಗಲಿ ಭಾಷೆ ಬಿಂಬಿಸುವುದು ಸದಭಿರುಚಿಯನ್ನಲ್ಲ ; ಜಾತಿಸೂಚಕ ನಿಂದನೆಯೂ ಕೆಲವಡೆ ಕಂಡು ಬರುತ್ತದೆ.

ಕ್ರಿ.ಶ. ೧೯೬೮ರ ಚಂದಕವಾಡಿ ಶಾಸನದ (ಚಾನ ೨೧೪) ಫಲಸ್ತುತಿ ಭಾಗದಲ್ಲಿ "ಪರದತ್ತಾಪಹಾರೇಣಸ್ವದತ್ತಂ ನಿಷ್ಫಲಂಭವೇತ್" ಎಂಬ ಪ್ರಸಿದ್ಧ ಶ್ಲೋಕಾರ್ಥವನ್ನು ಅತ್ಯಂತ ಸರಳವಾಗಿ "ತಾನು ಅಂನ್ಯಾಯವ ಮಾಡಿ ಕೊಡೆ ತಾನು ಕೊಟ್ಟುದು ನಿಷ್ಫಲಮ್" ಎಂದು ಅನುವಾದಿಸಿರುವುದು ಗಮನಾರ್ಹ.

ಕವಿ–ಲೇಖಕ–ರೂವಾರಿಗಳು : ಕ್ರಿ.ಶ. ೧೩೮೦ರ ಹೊಮ್ಮ ಶಾಸನವು (ಚಾನ ೧೪೮) "ಅಕ್ಷಾರದ ಗೋಪಂಣನ ಬರಹ". ಪ್ರಾಯಶಃ ಈತನು ಕವಿ ಇರಬೇಕು. ಕ್ರಿ.ಶ. ೧೫೧೧ರ ಮಲೆಯೂರು ಶಾಸನವನ್ನು (ಚಾನ ೩೫೮) ವಿದ್ಯಾನಂದೋಪಾಧ್ಯಾಯ ರಚಿಸಿದ. ಇದನ್ನು ಕಲ್ಲಿನ ಮೇಲೆ ಬರೆದವನು ವೃಷಭದಾಸವರ್ಣಿ. ಕ್ರಿ.ಶ. ೧೬೭೫ ರ ಚಾಮರಾಜನಗರ ಶಾಸನವು (ಚಾನ ೧೧) ತಿರುಮಲ ಯಾರ್ಯನ ರಚನೆ. ಈತ ಚಿಕ್ಕದೇವರಾಜ ವೊಡೆಯರ ಅಸ್ಥಾನದಲ್ಲಿ ಪ್ರಖ್ಯಾತ ಕವಿ ಹಾಗೂ ವಿದ್ವಾಂಸ. ಈತ ಅನೇಕ ಕೃತಿಗಳನ್ನು ರಚಿಸಿದನೆಂಬುದು ಸರ್ವವಿದಿತ ಸಂಗತಿ. ಸುಮಾರು ೧೭ನೆಯ ಶತಮಾನದ, ಹರದನ ಹಳ್ಳಿಯ ಒಂದು ಶಾಸನ (ಚಾನ ೨೭೨) "ಲಿಂಗೈನ ಬರಹ" ಈ ಶಾಸನೋಕ್ತ ದಾನಿಯೂ ಈತನೇ ಇರಬೇಕು. ಈತ ದೇವರಸಯ್ಯನ ಮೊಮ್ಮಗ, ಬೈರೋದೇವನ ಮಗ ಹಾಗೂ ಅದೇ ಊರಿನ ಕರಣಿಕ ನಾಗಿದ್ದವನು. ಹರದನ ಹಳ್ಳಿ ತಾಮ್ರ ಶಾಸನವು (ಚಾನ ೨೯೧) ವಿದ್ವಾನ್ ಕೃಷ್ಣದೀಕ್ಷಿತನಿಂದ ರಚಿತವಾದುದು; ಈತ ದೇವರಸಯ್ಯನ ಮೊಮ್ಮಗ, ಬೈರೋದೇವನ ಮಗ ಹಾಗೂ ಅದೇ ಊರಿನ ಕರಣಿಕ ನಾಗಿದ್ದವನು. ಹರದನಹಳ್ಳಿ ತಾಮ್ರ ಶಾಸನವು (ಚಾನ ೨೯೧) ವಿದ್ವಾನ್ ಕೃಷ್ಣದೀಕ್ಷಿತನಿಂದ ರಚಿತವಾದುದು; ಈತ ಕಾಶ್ಯಪಗೋತ್ರಜ ಹಾಗೂ

ಸೋಮಶಾಖೆಯವನು. ಕ್ರಿ.ಶ. ೧೫೫೫ ರ ಅರಕಲವಾಡಿ ಶಾಸನವು (ಚಾನ ೩೦೧) ರಂಗರಾಜಯ್ಯನ ಬರಹ, ರೂವಾರಿಗಳಲ್ಲಿ ಹನ್ನಿಬೋಜ (ಚಾನ ೧೪೩, ಕ್ರಿ.ಶ. ೧೪೧೩), ನಾರಣಾಚಾರಿ (ಚಾನ ೧೮೭, ಕ್ರಿ.ಶ. ೧೩೨೭) ಮೊದಲಾದರವು ಸೇರಿದ್ದಾರೆ. ಎಷ್ಟೋ ಶಾಸನಪಾಠಗಳ ಕರಡು ಪ್ರತಿಯನ್ನು ಸೇನಬೋವ ಮುಂತಾದ ಅದಿಕಾರಿಗಳು ಸಿದ್ದಪಡಿಸಿಕೊಟ್ಟರೆಂದು ತಿಳಿದುಬರುತ್ತದೆ.

ಚಾಮರಾಜನಗರ ತಾಲ್ಲೂಕಿನ ಶಾಸನಗಳನ್ನು ಬೇರೆ ಬೇರೆ ದೃಷ್ಟಿಕೋನಗಳಿಂದ ಅಧ್ಯಯನ ಮಾಡಲು ಸಾಧ್ಯವಿದೆ. ಎಂಬುದನ್ನು ತೋರಿಸುವ ತುಂಬ ಸ್ಥೂಲವಾದ ಹಾಗೂ ಮೇಲ್ಪದರದ ಒಂದು ಸಾಮಾನ್ಯ ಸಮೀಕ್ಷೆ ಇದು; ಸೂಕ್ಷ್ಮ ಒಳನೋಟಗಳು ಇಲ್ಲಿ ಕಾಣದಿರಬಹುದು. ಅದಕ್ಕೆ ಸತತ ಪ್ರಯತ್ನ ಮತ್ತು ಸಾಕಷ್ಟು ದೃಷ್ಟಿಯಿಂದಲೂ ಈ ತಾಲ್ಲೋಕಿನ ಶಾಸನಗಳು ಗಮನಾರ್ಹವಾದವು ಎನ್ನುವುದು ನಿರ್ವಿವಾದದ ಸಂಗತಿ.

## ಜಿಲ್ಲೆಯ ಜಾನಪದ ಕಲೆಗಳು

ಚಾಮರಾಜನಗರ ಜಿಲ್ಲೆ ಜಾನಪದ ಸಿರಿಯನ್ನು ಮೈತುಂಬಿಕೊಂಡ ಅಮೃತ ಲತೆ. ವಸುಂಧರೆಯ ಒಡಲ ರಮ್ಯ ತಾಣದಲಿ ಜನಪದ ಜೀವನದ ದಟ್ಟವಾದ ಅನುಭವ. ಪರಂಪರೆ ಮಡುಗಟ್ಟಿ ನಿಂತ ಹೊನ್ನೀರ ಸರೋವರ; ಭಾವ ಬಂಧುರಗಳು ಮೇಳೈಸಿ ಸಂಜೀವಿನಿಯಾಗಿಹ, ಪರಿಭಾವಿಸಿದಷ್ಟು ಅರ್ಥದ ಸೆಲೆ ತೆರೆದುಕೊಳ್ಳುವ, ಅಧ್ಯಯನಿಸಿದಷ್ಟು ಸೆಳೆತಕ್ಕೊಳಪಡುವ ಬೆಡಗಿನ, ಸೊಗಡಿನ ಜಾನಪದದ ರಸವತ್ತಾದ ಜಿಲ್ಲೆ.

ಕ್ರಿ.ಪೂ. ೯ನೆಯ ಶತಮಾನಕ್ಕೆ ಐರೋಪ್ಯ ದೇಶಗಳಲ್ಲಿ ಜನಪದ ಸಾಕಷ್ಟು ಜನಪ್ರಿಯವಾಗಿತ್ತು. ಋಗ್ವೇದ ಕಾಲದಿಂದಲೂ ಭಾರತದಲ್ಲಿ ಜನಪದವನ್ನು ಅದರ ಮೂಲವನ್ನು ಗುರುತಿಸಬಹುದು. ಪಂಚತಂತ್ರ, ಹಿತೋಪದೇಶ, ಶುಕ ಸಪ್ತತಿ, ಬೇತಾಳ ಪಂಚ ವಿಶಂತಿ, ಗುಣಾಢ್ಯನ ಮಂಜರಿ, ಸೋಮದೇವನ ಕಥಾ ಸರಿತ್ಸಾಗರ ಜನಪದದ ದೊಡ್ಡ ಕೋಶಗಳೆನಿಸುತ್ತದೆ. ಕನ್ನಡದ ಪ್ರಥಮ ಗದ್ಯಗ್ರಂಥ ವಡ್ಡಾರಾಧನೆ ಮೊದಲ ಜನಪದ ಕಥಾ ಸಂಕಲನ ಎನಿಸದಿರದು. ಇತ್ತೀಚಿನ ಬೇಂದ್ರೆ, ಮಾಸ್ತಿ, ಕೆ.ಎಸ್.ನರಸಿಂಹಸ್ವಾಮಿ, ಚಂದ್ರಶೇಖರ ಕಂಬಾರ ಮುಂತಾದವರ ಕವಿತೆಗಳನ್ನು ಓದಿದರೆ ಜನಪದದ ವಸ್ತು ವಿನ್ಯಾಸವೂ, ಶೈಲಿಯೂ ಹೆಪ್ಪುಗಟ್ಟಿದೆ ಎಂಬುದರಲ್ಲಿ ಸಂಶಯವಿಲ್ಲ.

ಕರ್ನಾಟಕದ ನೆಲದಲ್ಲಿ ಮಾದೇಶ್ವರ, ಮಂಟೇಸ್ವಾಮಿ, ಜುಂಜಪ್ಪ, ಎಲ್ಲಮ್ಮ, ಮೈಲಾರಲಿಂಗ ಇತ್ಯಾದಿ ಜನಪದ ಕಾವ್ಯಗಳು ಹೆಸರಾಂತ ಮಹಾಕಾವ್ಯಗಳು. ಫಿನ್‌ಲ್ಯಾಂಡಿನ 'ಕಲೇವಾಲ' ಕಾವ್ಯವನ್ನು ಬಿಟ್ಟರೆ ಇಡೀ ಜಗತ್ತಿನಲ್ಲಿ ಕಾಣಸಿಗುವ ಮತ್ತೊಂದು ಬೃಹತ್ ಮೌಖಿಕ ಮಹಾಕಾವ್ಯವೆಂದರೆ ಮಹದೇಶ್ವರ ಕಾವ್ಯ. ಇದೇ ನಾಡಿನಲ್ಲಿ ಮೌಲಿಕ ಹಾಗೂ ಅಧಿಕ ಜನಪದೀಯ ಸಂಸ್ಕೃತಿಯನ್ನು ಹುದುಗಿಸಿಕೊಂಡಿರುವ ಶ್ರೀಮಂತ ಜಿಲ್ಲೆ ಚಾಮರಾಜನಗರ. ಮಹದೇಶ್ವರ ಕಾವ್ಯ, ಬೀಸು ಕಂಸಾಳೆ, ಗೊರವರ ಕುಣಿತ, ಮಂಟಸ್ವಾಮಿ ಕಾವ್ಯ, ಲಂಬಾಣಿ ನೃತ್ಯ, ಪಿನಾಸಿ ನೃತ್ಯ, ಕೋಲಾಟ, ಸೋಬಾನೆ ಪದ, ವೀರ ಮಕ್ಕಳ ಕುಣಿತ, ಸುಗ್ಗಿ ಕುಣಿತ, ಬೀಸುಕಲ್ಲಿನ ಪದ ಹೀಗೆ ವೈವಿದ್ಯಮಯ ಜನಪದ ಸಂಸ್ಕೃತಿಯ ತವರು; ಪ್ರತಿ ಐದು ಜನರ ಗುಂಪಿನಲ್ಲಿ ಒಬ್ಬರು ರಂಗಭೂಮಿ, ಇಬ್ಬರು ಜನಪದ, ಇನ್ನಿಬ್ಬರು ಎರಡನ್ನೂ ಬಲ್ಲವರಾಗಿರುತ್ತಾರೆ.

**ಮಹದೇಶ್ವರ ಕಾವ್ಯ**

ಜನಪದೀಯ ಕಾವ್ಯದಲ್ಲಿ ಉಲ್ಲೇಖೀಸಿರುವಂತೆ ಮಹದೇಶ್ವರ ಉತ್ತರ ದೇಶದಿಂದ ಬಂದವನು. ಮಾದೇಶ್ವರ ಮಾದರ ಕುಲಕ್ಕೆ ಸೇರಿದವನು ಎಂಬುದಕ್ಕೆ ಸಾಕಷ್ಟು ಪುರಾವೆಗಳು ಸಿಗುತ್ತಿಲ್ಲ; ಶ್ರವಣದೊರೆ ಮಹದೇಶ್ವರರನ್ನು ಮಾದಿಗನೆಂದು ಸಂಬೋಧಿಸುವುದು ಹಾಗೂ ಶ್ರವಣ ದೊರೆಯನ್ನು ನಿರ್ನಾಮ ಮಾಡಲು ಮಾದೇಶ್ವರ ಚಮ್ಮಾಳಿಗೆಯನ್ನು ಬಳಸುವುದು ಇತ್ಯಾದಿಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಕೆಳ ವರ್ಗಕ್ಕೆ ಸೇರಿದವನು ಎಂಬುದರಲ್ಲಿ ಅನುಮಾನಗಳಿಲ್ಲ. ಪ್ರಸ್ತುತ ಅಸ್ತತ್ವದಲ್ಲಿರುವ ಈ ಪಂಥದ ದೇವರ ಗುಡ್ಡರ ಸಂಪ್ರದಾಯ, ಆಚರಣೆ ಗಮನಿಸಿದರೆ ಈ ವಾದಕ್ಕೆ ಪುಷ್ಟಿ ಸಿಗುತ್ತದೆ.

ಮಾದೇಶ್ವರನ ಜನಪದೀಯ ಕಾವ್ಯದಲ್ಲಿ ಬಸವಣ್ಣ ಮತ್ತು ಅಲ್ಲಮಾದಿಗಳ ಸಮಕಾಲೀನರು ಮಾದೇಶ್ವರ ಎಂಬ ಉಲ್ಲೇಖವಿದೆ. ಆದರೆ ಇತಿಹಾಸದ ಪುಟಗಳಲ್ಲಿ ಇದಕ್ಕೆ ಪುರಾವೆಗಳು ಸಿಗುತ್ತಿಲ್ಲ; ಹನ್ನೆರಡನೇ ಶತಮಾನದ ಶರಣರ ಚಳವಳಿಯ ನಂತರ ಮಾದೇಶ್ವರರ ಹೆಜ್ಜೆ ಗುರುತುಗಳು ಕಾಣ ಸಿಗುತ್ತವೆ.

ಹಸಿವಿನಿಂದ ಬಳಲುವ ಅನಾಥನಾಗಿ, ಅಸ್ತಿತ್ವಕ್ಕೆ ಹುಡುಕಾಟ ನಡೆಸುವ ಶರಣನಾಗಿ ಕಾಣಸಿಗುವ ಮಾದೇಶ್ವರ ಸುತ್ತೂರು ಮಠ, ಕುಂತೂರು ಮಠ, ಹರದನಹಳ್ಳಿ ಮಠ ಹೀಗೆ ಪರ್ಯಟನೆ ಮಾಡಿ ಎಲ್ಲಿಯೂ ತಳವೂರದೆ ನೂರಾರು ಹಳ್ಳಿ ಹಾಡಿಗಳನ್ನು ದಾಟಿ, ಬೆಟ್ಟಗುಡ್ಡಗಳನ್ನು ಹಾದು ಕೊನೆಗೆ ಸೀಗೆ ಸಿರುಗಂಧ ಕೆಮ್ಮತ್ತಿ

ಬೆಳೆಯುವ ದಟ್ಟ ಅರಣ್ಯದ ಮೂಡಲಸೀಮೆಗೆ ಒಲಿಯುತ್ತಾನೆ. ಬೇಡಗಂಪಣ, ಸೋಲಿಗ, ಆದಿವಾಸಿ ಕುರುಬರು ಅವನ ಸೇವಕರು; ಬಂಧುಗಳಾಗಿ ಮಾದೇಶ್ವರರ ಆಂತರ್ಯದ ಫಲ ಸಿಗುತ್ತದೆ.

ಮಾದೇಶ್ವರರ ಕಾವ್ಯವನ್ನು ಮಹಾಕಾವ್ಯವನ್ನಾಗಿಸಿದ ಮುಖ್ಯ ಘಟನೆಗಳು ಎರಡು; ಒಂದು ಸಂಕಮ್ಮನ ಸಾಲು, ಇನ್ನೊಂದು ಬೇವಿನಟ್ಟಿ ಕಾಳಮ್ಮನ ಸಾಲು. ಮೂಡಲಸೀಮೆಯ ದಟ್ಟಡವಿಯ ವಾಸಿಗಳಾಗಿದ್ದ ಸೋಲಿಗರು ಮಾದೇವನ ಒಕ್ಕಲಾದ ಬಗ್ಗೆ ಸಂಕವ್ವಳ ಸಾಲುಗಳಲ್ಲಿ ನಿರೂಪಿತವಾಗಿದೆ. ಸಂಕಮ್ಮಳನ್ನು ಲಗ್ನವಾದ ನೀಲಯ್ಯ ಕುಲದ ಹಿರಿಯರ ಆದೇಶದಂತೆ ಒಂಭತ್ತು ತಿಂಗಳ ಜೇನು ಬೇಟೆಗೆ ಮಡದಿಯನ್ನು ಬಿಟ್ಟು ಹೋಗಲು ಹಿಂಜರಿಯುತ್ತಾನೆ. ಸಂಕವ್ವಳ ಪಾತಿವ್ವಳ ಪಾತಿವ್ರತ್ಯ ಕುರಿತು ಆತಂಕಕ್ಕೀಡಾಗುತ್ತಾನೆ. ಮಡದಿಯ ಬಲಗೈ ಭಾಷೆ ಕೇಳಿದ ಗಂಡನ ಕುರಿತು ಪ್ರತಿಭಟಿಸುವ; ತರ್ಕಕ್ಕಿಳಿಯುವ ಸಂಕವ್ವ ಕಟ್ಟುಪಾಡಿನ ಮೌಲ್ಯಗಳನ್ನು ಧಿಕ್ಕರಿಸುತ್ತಾಳೆ. ಮಹಾ ಮೋಡಿಗಾರನಾದ ನೀಲಯ್ಯ ಗುಡಿಸಲು ಸುತ್ತ ಯಾರೂ ಕಾಲಿರಿಸದಂತೆ ಮಾಟ, ಮೋಡಿ ಜೇನು ಬೇಟೆಗೆ ಹೊರಡುತ್ತಾನೆ. ಮೋಡಿಕಾರರ ಗುರುವೆನಿಸಿದ ಮಾಯ್ಕಾರ ನೀಲಯ್ಯನ ಎಲ್ಲಾ ಮೋಡಿ, ಮಾಟಗಳನ್ನು ನಿರರ್ಥಕಗೊಳಿಸಿ ಸಂಕವ್ವಗಳನ್ನು ರಕ್ಷಿಸುತ್ತಾನೆ. ಮಾದೇಶ್ವರರ ವರದಿಂದ ಹುಟ್ಟಿದ ಕಾರಯ್ಯ, ಬಿಲ್ಲಯ್ಯ ದೀಕ್ಷೆ ಪಡೆದು ದೇವರ ಗುಡ್ಡರಾಗುತ್ತಾರೆ; ಬೇಟೆ, ಮೋಡಿ, ಮಾಟ, ವರ, ಪಿಂಡುಪರಸಾದ ಇವೆಲ್ಲ ಬುಡಕಟ್ಟು ಜನಾಂಗದ ಜೀವನ ಪದ್ಧತಿಯನು ತೆರೆದಿಡುವ ಕಾವ್ಯವೊಂದರ ಆಶಯ.



ಕುರುಬರ ಬೇವಿನಕಟ್ಟಿ ಕಾಳಮ್ಮನ ಕಥನ ಕಾವ್ಯ, ಮಾದೇಶ್ವರ ಕಾವ್ಯದ ಮತ್ತೊಂದು ಪ್ರಮುಖ ಭಾಗ, ಲೆಕ್ಕಕ್ಕೆ ಸಿಗದಷ್ಟು ದನಕರು, ಆಳುಕಾಳುಗಳನ್ನು ಹೊಂದಿದ್ದ ಕಾಳಮ್ಮ ಹಣ, ಐಶ್ವರ್ಯ ತುಂಬಿ ತುಳುಕುವ ಸಿರಿವಂತಿಕೆಯವಳು. ಸುತ್ತಲ ಹದಿನಾರು ಊರಿಗೆ. ನೂರಾರು ಎಕರೆ ಜಮೀನಿನಲ್ಲಿ ಕೃಷಿ ಮಾಡಿ ಬೆಳೆದರೂ ಕಿಂಚಿತ್ತೂ ಅನ್ಯರಿಗೆ ಕೊಡದ ಜಿಪುಣತನ. ಕುರಿ ಕಾಯುವ ತನ್ನ ಗಂಡ ಬರಗನ ಬಾಯಿಗೆ ತುತ್ತಾದರೂ ಸರಿಯೆ ಹೊಲದಲ್ಲಿನ ಬೆಳೆ ಹಾಗೂ ಸಂರಕ್ಷಣೆ ಅವಳಿಗೆ ಮುಖ್ಯ. ವಿಷಯ ಇಂತಿರಲಾಗಿ ಎಳ್ಳಿನ ಭಿಕ್ಷೆಗಾಗಿ ಮಾದೇಶ್ವರರು ಅಲ್ಲಿಗೆ ಧಾವಿಸುತ್ತಾರೆ. ಹೆಚ್ಚಳತನದಿಂದ ಮೆರೆಯುತ್ತಿದ್ದ ಕಾಳಮ್ಮ ತನ್ನ ಸರ್ವಸ್ವವ ನಾಶವಾದರೂ ಎಳ್ಳಿನ ಬಿಕ್ಷೆ ನೀಡುವುದಿಲ್ಲ ಎಂಬುದಾಗಿ ಸವಾಲು ಎಸೆಯುತ್ತಾಳೆ. ಸ್ವಾಭಿಮಾನಿ ಹೊನ್ನುಣಸೆ

ಕಾಳಮ್ಮಳ ಸಂಘರ್ಷವನು ಸಮರ್ಥವಾಗಿ ಎದುರಿಸಿದ ಮಾದೇಶ್ವರ ಒಡೆತನದ ಬಗ್ಗು ಬಡಿದು ತನ್ನ ಒಕ್ಕಲುಗಳನ್ನು ಹೆಚ್ಚಿಸಿಕೊಳ್ಳುತ್ತಾ ಸಾಗುತ್ತಾನೆ.

ಇಲ್ಲಿನ ನೆಲದಲ್ಲಿ ೧೩ನ ಶತಮಾನದಿ ನಡೆದಿರುವ ಈ ಜನಪದೀಯ ಐತಿಹ್ಯವನ್ನು ಮೈಮನ ತುಂಬಿಕೊಂಡಿರುವ ಇಲ್ಲಿನ ಜನಪದರು ಎರಡು ಪ್ರಕಾರಗಳಲ್ಲಿ ಅಭಿವ್ಯಕ್ತಿಸುತ್ತಾರೆ. ಒಂದು ಬೀಸುಕಂಸಾಳೆ ಮತ್ತೊಂದು ಕಾವ್ಯಗಾಯನ.

ಮಾದೇಶ್ವರ ಸ್ವಾಮಿಯ ಕಥನ ಕಾವ್ಯವನ್ನು ದಿನಗಟ್ಟಲ ಹಾಡುವ ಕಲಾವಿದರು ಜಿಲ್ಲೆಯಲ್ಲಿದ್ದಾರೆ. ಚಾಮರಾಜನಗರ ಜಿಲ್ಲೆ ಮಾತ್ರವಲ್ಲದೆ, ಮೈಸೂರು, ಮಂಡ್ಯ ಜಿಲ್ಲೆಯಲ್ಲಿಯು ಅಪಾರ ಸಂಖ್ಯೆಯಲ್ಲಿರುವ ಇವರು ದೀಕ್ಷೆ ತೊಟ್ಟು ಗುಡ್ಡರಾದ ನಂತರವೆ ಕಾವ್ಯ ಗಾಯನ, ಬೀಸು ಕಂಸಾಳೆ ಮಾಡುವ ಕಲಾವಿದರಾಗಿದ್ದಾರೆ ಎಂಬುದರಲ್ಲಿ ಎರಡು ಮಾತಿಲ್ಲ. ಮೂರ್ನಾಲ್ಕು ಕಲಾವಿದರು ಒಟ್ಟಿಗೆ ಸೇರಿಕೊಂಡು ಮಾದೇಶ್ವರನ ಕಥನದ ತುಣುಕು ಹಾಡುತ್ತ ಮನೆಮನೆಗೆ ತೆರಳಿ ಉಪದಾನ ಬೇಡುವ ದೇವರ ಗುಡ್ಡರು ಒಂದೆಡೆಯಾದರೆ ಮತ್ತೊಂದೆಡೆ, ವೇದಿಕೆಯನೇರಿ ಮಹದೇಶ್ವರ ಕಥನದ ಸಂಕಮ್ಮ ಸಾಲು, ಬೇವಿನಕಟ್ಟಿ ಕಾಳಮ್ಮ ಸಾಲು, ಶ್ರವಣದೊರೆ ಸಾಲು, ಸರಗೂರಯ್ಯನ ಸಾಲು, ಮುದ್ದಮ್ಮ ಸಾಲು ಇತ್ಯಾದಿಯಾಗಿ ಯಾವುದಾದರೂ ಒಂದು ಘಟನೆಯನ್ನು ಕೇಂದ್ರಿಕರಿಸಿ ಅಹೋ ರಾತ್ರಿ ಹಾಡುವುದಿದೆ. ಮುಖ್ಯ ಗಾಯಕ ತಂಬೂರಿ ನುಡಿಸುತ್ತಾ ಹಾಡುತ್ತಿದ್ದರೆ ಉಳಿದ ಸಹ ಕಲಾವಿದರು ದಮ್ಮಡಿ, ಕಂಸಾಳೆ, ಚಿಟಿಕೆ ನುಡಿಸುತ್ತ ಸೊಲ್ಲು ಹಾಕುತ್ತಾರೆ. ಹಾಡಲು ಕುಳಿತರೆಂದರೆ ಇಹಪರಗಳ ಮರೆತು ತಂಬೂರಿಯೊಂದಿಗೆ ಧ್ವನಿಗೂಡಿಸುವ ಗುಡ್ಡರು ಅನಕ್ಷರಸ್ಥರಾದರೂ ಜನಪದದ ಅನಘ್ಯ ಶ್ರೇಷ್ಟರು. ಐತಿಹ್ಯದ ಘಟನೆಯನ್ನು ಕಣ್ಣಿಗೆ ಕಟ್ಟಿಡುವಂತಹ ನಿರೂಪಣಾ ಶೈಲಿ ಎಂತಹವರ ಮನವನ್ನು ತುಂಬದಿರಲಾರದು.

ಕುಂತೂರು ಕಾಳಶೆಟ್ಟಿ, ಮಲೆಯೂರು ಹುಚ್ಚಶೆಟ್ಟಿ, ಕಟ್ಟೆಪುರ ಸಿದ್ದರಾಜು, ದೊಡ್ಡಮೋಳೆ ದೊಡ್ಡಗವಿಬಸಪ್ಪ, ಹೊನ್ನೂರು ವೆಂಕಟರಂಗಶೆಟ್ಟಿ, ಬಸವಾಪುರ ಮಹದೇವನಾಯ್ಕ, ರಾಮಸಮುದ್ರ ನಿಂಗಶೆಟ್ಟಿ, ಅಂಕಹಳ್ಳಿ ಸಿದ್ದಯ್ಯ, ದೊಡ್ಡಿಂದುವಾಡಿ ಮಾದಶೆಟ್ಟಿ, ಹೊಂಗನೂರು ಕಲ್ಲಪ್ಪ, ಬೊಮ್ಮನಹಳ್ಳಿ ಪುಟ್ಟಲಿಂಗಯ್ಯ, ಮಾದಹಳ್ಳಿ ನೀಲಗಾರ ಸಿದ್ದಯ್ಯ, ದೊಡ್ಡರಾಯಪೇಟೆ ಮಾದಯ್ಯ ಹೀಗೆ ಜಿಲ್ಲೆಯ ನೂರಾರು ದೀಕ್ಷೆ ತೊಟ್ಟ ದೇವರ ಗುಡ್ಡರು ಕಾವ್ಯ ಗಾಯನದಲ್ಲಿ ತೊಡಗಿಸಿಕೊಂಡಿದ್ದಾರೆ. ಅವರ ಜೊತೆಯಲ್ಲಿರುವ ಸಹ ಕಲಾವಿದರೂ ಮುಖ್ಯ ಗಾಯಕನಷ್ಟೆ ಸಮರ್ಥರು ಎಂಬುದನ್ನು

ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಬಿಡಿಬಿಡಿಯಾಗಿ ಹಾಡುವ ಸಾವಿರಾರು ಗುಡ್ಡರು ಜಿಲ್ಲೆಯಾದ್ಯಂ ಚದುರಿ ಹೋಗಿದ್ದು ಅವರ ಕಂಠತ್ರಾಣಿ, ಏಕತಾನತೆ, ಅನನ್ಯತೆ, ಅನಕ್ಷರಸ್ಥ ಸಮುದಾಯವಾಗಿದ್ದರೂ ಅವರ ಸ್ಮರಣ ಶಕ್ತಿ ಎಂತಹವರನ್ನೂ ನಿಬ್ಬೆರಗಾಗಿಸದೆ ಬಿಡದು!

ಮಾದೇಶ್ವರನ ಗುಡ್ಡರ ಇನ್ನೊಂದು ಜಾನಪದ ಪ್ರಕಾರ ಬೀಸು ಕಂಸಾಳೆ. ಕಣ್ಣಿಗೆ ರಾಚಿಸುವ ಕೆಂಪುಬಣ್ಣದ ಬನಾತು ತೊಟ್ಟು, ಕಾಲಿಗೆ ಹುರಿಗೆಜ್ಜೆ, ಹಣೆಯಲ್ಲಿ ವಿಭೂತಿ, ಕೈಯಲ್ಲಿ ಕಂಸಾಳೆ ಬಟ್ಟಲು ಹಿಡಿದು ಬೀಸು ಕಂಸಾಳೆ ನೃತ್ಯಕ್ಕೆ ಮುಂದಾಗುವ ಕಲಾವಿದರು. ವೃತ್ತಾಕಾರದಲ್ಲಿ ನಿಂತು ಒಬ್ಬರು ಕೈಯಲ್ಲಿಡಿದ ಬಟ್ಟಲಿಗ ಮತ್ತೊಬ್ಬರು ಕಂಸಾಳೆ ಹುಯ್ಯುತ್ತಾ ನೃತ್ಯ ಮಾಡುತ್ತಾ ಬಲಿಸುತ್ತಾರೆ. ಬಗೆಬಗೆಯ ಮಟ್ಟುಗಳಲ್ಲಿ ಕುಣಿವ ಗುಡ್ಡರು ಆಗೊಮ್ಮೆ ಈಗೊಮ್ಮೆ 'ಮಾದೇಶ್ವರನಿಗೆ ಉಘೇ..' ಎಂದು ಉದ್ಘೋಷ ಕೂಗುತ್ತಾ ಥಂಗನೆ ಆಳೆತರಕ್ಕೆ ನೆಗೆಯುತ್ತಾರೆ. ಒಬ್ಬರ ಮೇಲೊಬ್ಬರು ಮತ್ತೊಬ್ಬರ ಮೇಲೆ ಇನ್ನೊಬ್ಬರು ಪಿರಮಿಡ್ಡನ್ನು ನಿರ್ಮಿಸಿ ಕಂಸಾಳೆ ನುಡಿಸುತ್ತಾರೆ. ಆವೇಶದಿಂದ ನೆಗೆಯುವ, ಕಂಸಾಳೆವರಸೆ ಮಾಡುವ ಗುಡ್ಡರು ತಮ್ಮನ್ನೇ ಪಣಕ್ಕೊಡ್ಡಿ ನರ್ತಿಸುತ್ತಾರೆ. ಇವರಿಗೆ ಸಾಥಿ ನೀಡುವ ಸಲುವಾಗಿ ನಾಲ್ಕೈದು ಗುಡ್ಡರು ದಮ್ಮಡಿ ಕಂಸಾಳೆ ನುಡಿಸುತ್ತಾ ಆರಾಧ್ಯದೈವ ಮಾದೇಶ್ವರನ ಕುರಿತು ಹಾಡುತ್ತಾರೆ. ಮರದ ಕಾಲುಗಳ ಮೇಲೆ ೪-೫ ಅಡಿ ಎತ್ತರದಲಿ ನಿಂತು ಕಂಸಾಳೆ ನೃತ್ಯ ಪ್ರದರ್ಶಿಸುವ ಕಲಾವಿದರು ನೋಡುಗರನ್ನು ವಿಸ್ಮಯಗೊಳಿಸಿ ಸಾಹಸ ಮೆರೆಯುತ್ತಾರೆ.

ಪ್ರದರ್ಶನ ಮತ್ತು ತರಬೇತಿ ಕಠಿಣ ಎನಿಸಿದಾಗಿಯೂ ಹತ್ತಾರು ಬೀಸು ಕಂಸಾಳೆ ನೃತ್ಯ ತಂಡಗಳು ಜಿಲ್ಲೆಯಲ್ಲಿವೆ ಎಂಬುದೇ ಹೆಮ್ಮೆಯ ಸಂಗತಿ. ಆಲೂರು ಮಾದಶೆಟ್ಟಿ, ಬ್ಯಾಡಮೂಡ್ಲು ಮಾದೇವಶೆಟ್ಟಿ, ದೋಸೆ ಮಾದೇವಶೆಟ್ಟಿ, ಹೊನ್ನಹಳ್ಳಿ ಶಿವಮಲ್ಲೇಗೌಡ, ಮಹದೇವಸ್ವಾಮಿ ಕಡುವಿನ ಕಟ್ಟೆಹುಂಡಿ ಶಿವೇಗೌಡ, ರಾಮಸಮುದ್ರ ಮಹದೇವಸ್ವಾಮಿ, ಶಂಕರ, ರಾಮಸಮುದ್ರ ಲಿಂಗಣ್ಣ, ಬಂಡಿಗೆರೆ ಸಿದ್ದಶೆಟ್ಟಿ, ಚೆನ್ನಿಗ ಇತ್ಯಾದಿ ಪ್ರಮುಖರಲ್ಲದೆ ಇನ್ನೂ ಹಲವು ತಂಡಗಳ ವಿಭಿನ್ನ ಶೈಲಿಯಲ್ಲಿ ಬೀಸುವ ಕಂಸಾಳೆ ನೃತ್ಯ ಮಾಡುತ್ತವೆ.

## ಮಂಟೇಸ್ವಾಮಿ ಕಾವ್ಯ

ಮಂಟೇಸ್ವಾಮಿ ಉತ್ತರ ದೇಶದಿಂದ ಬಂದ ಕೆಳವರ್ಗದ ಸಾಂಸ್ಕೃತಿಕ ನಾಯಕ ಮಂಟಸ್ವಾಮಿಯನ್ನು 'ಧರೆಗೆ ದೊಡ್ಡವರು' ಎಂದು ಕರೆಯುವುದಿದೆ. ಪಟ್ಟಭದ್ರ

ಸಂಸ್ಕೃತಿಗೆ ವಿರುದ್ಧವಾದ ಕೆಳವರ್ಗಗಳ ಅಸ್ತಿತ್ವವನ್ನು ಪುನರ್ ಸ್ಥಾಪಿಸುವ ಪ್ರತಿ ಸಂಸ್ಕೃತಿಯೊಂದರ ನಿರ್ಮಾಣ ಮಂಟೇಸ್ವಾಮಿಯವರ ಉದ್ದೇಶವಾಗಿದ್ದಂತೆ ಜನಪದ ಉಲ್ಲೇಖವಿದೆ. ಮಹಾತ್ಮರು ಸಾಮಾನ್ಯವಾಗಿ ತ್ರಿಮೂರ್ತಿಗಳ ವರದಿಂದಲೋ, ಶಾಪದಿಂದಲೋ, ಬೆವರಿನಿಂದಲೋ ಜನ್ಮಿಸುವುದು ಪುರಾಣದ ವಾಡಿಕೆ. ಆದರೆ ಮಂಟೇಸ್ವಾಮಿ ಹುಟ್ಟಿನ ಪುರಾಣ ಈ ಎಲ್ಲವನ್ನೂ ಮೀರಿದ್ದು; ಮಂಟೇಸ್ವಾಮಿಯೆ ಜಗದ ಸೃಷ್ಟಿಕರ್ತ ಭೂಮಿ, ಸೂರ್ಯ, ಚಂದ್ರ ತ್ರಿಮೂರ್ತಿಗಳನ್ನು ಸೃಷ್ಟಿಸಿದ. ಬ್ರಹ್ಮಾಂಡವನ್ನೆ ಸೃಷ್ಟಿಸಬಲ್ಲ ಮಾಯಕಾರನಾಗಿ ಕಾಣಸಿಗುವ ಮಂಟಸ್ವಾಮಿ ಅಹಂಕಾರಿಗಳ ಅಸ್ತಿತ್ವವನ್ನು ಪಲ್ಲಟಗೊಳಿಸುವ ಹಾಗೂ ಕಟ್ಟಿದ ಲಿಂಗದ ಬದಲಾಗಿ ಆತ್ಮಲಿಂಗದ ಶ್ರೇಷ್ಠತೆಯನ್ನು ಸಾರುವ ಒಬ್ಬ ಜ್ಯೋತಿ ಪುರುಷ.

ಹೊಲೆಯ ಜಾತಿಯವನೆಂದು ಗುರುತಿಸಲಾಗುವ ಮಂಟೇಸ್ವಾಮಿ ತಮ್ಮನ್ನು ನಂಬಿದ ಜನವರ್ಗವನ್ನು ಪ್ರಭುತ್ವದ ದಬ್ಬಾಳಿಕೆಯಿಂದ ರಕ್ಷಿಸಬಲ್ಲ ಶಕ್ತಿಯುಳ್ಳವನು. ಮಂಟೇಸ್ವಾಮಿ ಅವರು ಅಸಹ್ಯಕರ ವೇಷದ ರೋಗಿಯಾಗಿ ಕಲ್ಯಾಣ ಪಟ್ಟಣಕ್ಕ ಪ್ರವೇಶಿಸುವುದರೊಂದಿಗೆ ಧರೆಗೆ ದೊಡ್ಡವರ ಕಾವ್ಯ ತೆರೆದುಕೊಳ್ಳುತ್ತದೆ. ಕಲ್ಯಾಣದ 'ರಂಡ ಪ್ರಚಂಡ' ಜಂಗಮರು ಕಟ್ಟಿದ್ದ ಲಿಂಗಗಳನ್ನು ಕಲ್ಯಾಣಿಯಲ್ಲಿ ಮಾಯ ಮಾಡುವ, ಕಡೆಗೆ ಕಲ್ಯಾಣದಲ್ಲಿ ಉಳಿಯಲು ಯೋಗ್ಯರಾದ ಶರಣರೆಂದರೆ ಹೊಲೆಯರ ಹೊನ್ನಯ್ಯ, ಮಾದಿಗರ ಚನ್ನಯ್ಯ, ಮಡಿವಾಳ ಮಾಚಯ್ಯ, ಗಾಣಿಗರ ದಾಸಯ್ಯ, ಅಂಬಿಗರ ಚೌಡಯ್ಯ, ಈಡಿಗರ ಕ್ಯಾತಯ್ಯ, ಕುರುಬರ ಬೀರಯ್ಯ ಇತ್ಯಾದಿ ಶೂದ್ರಾತಿಶೂದ್ರ ಶಿವಶರಣರೆಂದು ಪ್ರತಿಪಾದಿಸಿದ ವಿಚಾರ ಹಲವು ಸಾಂಸ್ಕೃತಿಕ ಚರ್ಚೆಗಳಿಗೆ ದಾರಿ ಮಾಡಿಕೊಡುತ್ತದೆ.

ರಾಚಪ್ಪಾಜಿ, ತೋಪಿನ ದೊಡ್ಡಮ್ಮ, ಚೆನ್ನಾಜಮ್ಮ, ಫಲಾರದಯ್ಯ, ಮಡಿವಾಳ ಮಾಚಯ್ಯ, ಸಿದ್ದಪ್ಪಾಜಿ ಇವರೆಲ್ಲ ಮಂಟೇಸ್ವಾಮಿ ಪಂದ ಪ್ರಮುಖ ಅನುಯಾಯಿಗಳು; ಇವರನ್ನು ಶಿಶು ಮಕ್ಕಳಾಗಿ ಪಡೆಯುವುದೇ ಒಂದೊಂದು ಕಥಾನಕವಾಗಿ ರೂಪುಗೊಳ್ಳುತ್ತದೆ.

ಮಂಟೇಸ್ವಾಮಿ ಅಹಂಕಾರಿಗಳನ್ನು ಬಿಡುವವನಲ್ಲ. ಎಂತಹ ದೊಡ್ಡವರಾದರೂ ಅವರ ಅಸ್ತಿತ್ವವನ್ನೆ ಪಲ್ಲಟಗೊಳಿಸಬಲ್ಲ ಶಕ್ತಿ ಅವನಿಗಿದೆ. ದ್ವಂದ್ವ, ಬಿಕ್ಕಟ್ಟು ಎದುರಾದಾಗಲೆಲ್ಲ ಆಧ್ಯಾತ್ಮಿಕ ನೇತಾರನಾಗಿ ಕಾಣಿಸಿಕೊಳ್ಳುವ ಮಂಟೇಸ್ವಾಮಿ ಸಾಧ್ಯವಾಗದಿದ್ದಾಗ ಮೌನ ಧರಿಸುವನು. ಕುಂದೂರು ಬೆಟ್ಟದ ತುತ್ತ ತುದಿಯಲ್ಲಿ ಕುಳಿತು

ಭಂಗಿ ಚಿಲುಮೆ ಸೇವಿಸುತ್ತಾನೆ. ಖಂಡುಗಗಟ್ಟಲೆ ಭಂಗಿ ಸೇದಿಸಿ ವಾಲುತ್ತಾ ಜೋಲುತ್ತಾ ಇರುವಾಗ ಪರಿಹಾರಗಳು ಹೊಳೆಯುತ್ತವೆ. ತಕ್ಷಣ ಕಾರ್ಯಕ್ಷೇತ್ರದತ್ತ ಹೊರಡುತ್ತಾನೆ. ಮಂಟೇಸ್ವಾಮಿ ಕಾವ್ಯದ ವಿಶಿಷ್ಟತೆಯೆಂದರೆ ಎಲ್ಲಿಯೂ ಹಿಂಸೆ ನಡೆಯುವುದಿಲ್ಲ.

ಕಲ್ಯಾಣ ಹೊರಟ ಮಂಟೇಸ್ವಾಮಿಯ ಯಾತ್ರೆ ಕಾಗಿನೆಲೆ, ವಿಜಯನಗರ, ಸಖರಾಯ ಪಟ್ಟಣ, ಚನ್ನಪಟ್ಟಣ, ಮಳವಳ್ಳಿ, ಕಾಡಂಕನಹಳ್ಳಿ, ಬೊಪ್ಪೇಗೌಡನ ಪುರ, ಹಲಗೂರು, ಎಡತೊರೆ, ಕಾರುಗಹಳ್ಳಿ ಇತ್ಯಾದಿ ಪ್ರದೇಶಗಳಲ್ಲಿ ಅಚ್ಚೊತ್ತಿದೆ. ಕಾವ್ಯದ ಐತಿಹ್ಯ ಕಾಣಸಿಗುತ್ತದೆ. ರಾಜ ಬೊಪ್ಪೇಗೌಡನಪುರದಲ್ಲಿ ಧರೆಗೆ ದೊಡ್ಡವರು ಮಂಟೇಸ್ವಾಮಿ ಗದ್ದುಗೆ, ಅವರ ಶಿಷ್ಯರಾದ ರಾಚಪ್ಪಾಜಿಯ ಗದ್ದುಗೆ ಕಪ್ಪಡಿಯಲ್ಲಿ ಹಾಗೂ ಸಿದ್ದಪ್ಪಾಜಿಯ ಗದ್ದುಗೆ ಚಿಕ್ಕಲ್ಲೂರಿನಲ್ಲಿದೆ.

ಸುಮಾರು ಏಳನೂರು ವರ್ಷಗಳ ಹಿಂದೆ ನಡೆದಿರಬಹುದಾದ ಈ ಐತಿಹ್ಯ ಚಲನಶೀಲ ಸಮಾಜ ಮತ್ತು ಸಂಸ್ಕೃತಿ ಪರಿಣಾಮದಿಂದಾಗಿ ಎಲ್ಲೆಡೆ ಪಸರಿಸಿದೆ. ಚಾಮರಾಜನಗರ ಜಿಲ್ಲೆಯ ಪ್ರತಿ ಊರಿನಲ್ಲಿಯೂ ಮಂಟಸ್ವಾಮಿ ಒಕ್ಕಲಿನವರಿದ್ದಾರೆ. ದಿನಗಟ್ಟಲೆ ಕಾವ್ಯ ಹಾಡುವ ನೀಲಗಾರರಿದ್ದಾರೆ. ಹಾವಿನ ಹೆಡೆಯಾಕಾರದ ತಂಬೂರಿ, ದಮ್ಮಡಿ ತಾಳ, ಗಗ್ಗರ ಇವರ ಸಾಥಿ. ಬಗಲಲ್ಲಿ ಜೋಳಿಗೆ ಧರಿಸಿ ಉಪದಾನಕ್ಕೆ ತೆರಳುವ ನೀಲಗಾರರು ಊರು ಕೇರಿಯ ಸುತ್ತಾಡುತ್ತಾ ಮನೆಮನೆಗೆ ತೆರಳಿ ಕಾವ್ಯ ಹಾಡುತ್ತಾ ಉಪದಾನ ಕೇಳುತ್ತಾರೆ. ವರ್ಷಕ್ಕೆ ಒಂದು ದಿನವಾದರೂ ಉಪದಾನ ಮಾಡಲೇಬೇಕೆಂಬುದು ಅವರ ಪದ್ಧತಿ. ಮತ್ತೆ ಹಲವಾರು ವೃತ್ತಿ, ಅರೆವೃತ್ತಿ ಕಲಾವಿದರು ಆಗಿದ್ದಾರೆ. ಜಿಲ್ಲೆಯಾದ್ಯಂತ ಚದುರಿಕೊಂಡಿರುವ ಮಂಟೇಸ್ವಾಮಿ ಕಲಾವಿದರು ನೆಲದ ವೈಭವ ಸಾರುತ್ತಾ, ಮಂಟೇಸ್ವಾಮಿ ಮತ್ತು ಶಿಷ್ಯರನ್ನು ನೆನೆಯುತ್ತ ಗ್ರಾಮ್ಯ ಸೊಗಡಿನ ಪದಚ್ಚಾರದಿ ಕಾವ್ಯ ಕಟ್ಟುತ್ತಾರೆ.

ಕುಂತೂರು ಕಾಳಶೆಟ್ಟಿ, ಕೆಬ್ಬೇಪುರದ ಸಿದ್ದರಾಜು, ಅಂಕಹಳ್ಳಿ ತಂಬೂರಿ ಸಿದ್ದಯ್ಯ, ರಾಮಸಮುದ್ರ ನಿಂಗಶೆಟ್ಟಿ, ದೊಡ್ಡಮೋಳೆ ಸಿದ್ದಶೆಟ್ಟಿ, ಮಲೆಯೂರು ಹುಚ್ಚಶೆಟ್ಟಿ, ಬೊಮ್ಮನಹಳ್ಳಿ ಪುಟ್ಟಲಿಂಗಯ್ಯ, ಬಸವಾಪುರದ ಮಹದೇವನಾಯ್ಕ, ಹೊನ್ನೂರು ವೆಂಕಟರಂಗಶೆಟ್ಟಿ, ಬ್ಯಾಡಮೂಡ್ಲು ಮಾದಶೆಟ್ಟಿ, ಬಸವಾಪುರ ನಾಗೇಗೌಡ, ದೊಡ್ಡಮೋಳೆ ದೊಡ್ಡಗದಿಶೆಟ್ಟಿ, ರಾಮಸಮುದ್ರ ಲಿಂಗಣ್ಣ, ದೊಡ್ಡರಾಯಪೇಟೆ ತಂಬೂರಿ ಮಾದಯ್ಯ, ಹೊಂಗನೂರು ಕಲ್ಲಪ್ಪ, ಕೃಷ್ಣಾಪುರ ಸಿದ್ದಶೆಟ್ಟಿ, ಕೆಂಪನಪುರ ಸಿದ್ದರಾಜು (ಕುಂಡಪ್ಪ), ಮಾಂಬಳ್ಳಿ ಶ್ರೀನಿವಾಸ, ದಮ್ಮಡಿ ರಾಚಯ್ಯ, ರಾಘವಪುರ ಬಸವಯ್ಯ,

ಹೆಗ್ಗಡಹಳ್ಳಿ ಮರಿಯಯ್ಯ, ಕರಕಲ ಮಾದಹಳ್ಳಿ ನೀಲಗಾರ ಸಿದ್ದಯ್ಯ, ಅಂಕಹಳ್ಳಿ ರಾಚಯ್ಯ, ದೊಡ್ಡಮೋಳೆ ಸಣ್ಣಶೆಟ್ಟಿ, ದೊಡ್ಡರಾಯಪೇಟೆ ಸಿದ್ದಶೆಟ್ಟಿ, ಮಾದಶೆಟ್ಟಿ, ಚಾಮರಾಜನಗರದ ಬಾಬು ಜಗಜೀವನರಾಂ ಬಡಾವಣೆಯ ಲಿಂಗಯ್ಯ, ಮಹೇಶ, ಸಿದ್ದರಾಜು, ಹೊಂಗನೂರು ಆಲಗೂಡಯ್ಯ ಪ್ರಮುಖ ಗಾಯಕರು. ಇವರೊಟ್ಟಿಗೆ ಸಹ ಗಾಯಕರಾಗಿ ಹಾಡುವ ನೂರಾರು ಕಲಾವಿದರಿದ್ದಾರೆ. ಸಾಥಿ ನೀಡುವ ವಾದ್ಯ ಪರಿಕರದವರಿದ್ದಾರೆ. ತಂಡ ಕಟ್ಟಿಕೊಂಡು ಹಾಡುವ ಕಲಾವಿದರಲ್ಲದೆ ಎಲೆಮರೆ ಕಾಯಿಯಂತಿದ್ದು ಹಾಡುವ ಸಾವಿರಾರು ದೇವರ ಗುಡ್ಡರು ಜಿಲ್ಲೆಯಲ್ಲಿದ್ದಾರೆ.

ಮೂಲ ಧಾಟಿಯಲ್ಲಿ ಹಾಡುವ ಜಾನಪದ ಕಲಾವಿದರಿಂದ ಸ್ಫೂರ್ತಿಗೊಂಡು ಹಾಡುವ ಯುವ ಪೀಳಿಗೆಯ ಕಲಾವಿದರಿಗೇನು ನಮ್ಮಲ್ಲಿ ಕೊರತೆಯಿಲ್ಲ. ಈ.ರಾಜಪ್ಪ, ಪಿ.ಮಹೇಶ್, ಮಂಜುನಾಥ್ ಎಂ., ಚಂದ್ರಶೇಖರ್, ಅಂಬಳೆ ಸಿದ್ದರಾಜು, ಮಹಾಲಿಂಗ ಗಿರ್ಗಿ, ಆರ್.ಮಹೇಂದ್ರ, ಆರ್.ರವಿಕುಮಾರ್, ಸಿ.ಎಂ.ನರಸಿಂಹಮೂರ್ತಿ, ಸೋಮಹಳ್ಳಿ ನಾಗರಾಜು, ದಶಕಂಠ ಮಲ್ಲಣ್ಣ, ಧನಲಕ್ಷ್ಮಿ, ಮಂಗಳಗೌರಿ, ಕಲೆ ನಟರಾಜು, ಎಸ್.ನಟರಾಜು ಇತ್ಯಾದಿ ಗಾಯಕರು ಜಾನಪದದ ರಸ ಹೀರಿಕೊಂಡು ಮೂಲ ಧಾಟಿಯನು ಸರಳಗೊಳಿಸಿದ ಶೈಲಿಯಲ್ಲಿ ಗೀತ ಗಾಯನ ಮಾಡುತ್ತಿದ್ದಾರೆ.

**ಗೊರವರ ಕುಣಿತ**

ಕರ್ನಾಟಕದ ವಿಶಿಷ್ಟ ಜನಪದ ಕಲೆ ಗೊರವರ ಕುಣಿತ, ರಾಮನಗರ, ಚನ್ನಪಟ್ಟಣ, ಧಾರವಾಡ, ಹುಬ್ಬಳ್ಳಿಯಲ್ಲಿ ಮೈಲಾರಲಿಂಗನ ಶಿಷ್ಯರೆಂದು ಗುರುತಿಸಿಕೊಳ್ಳುವ ಗೊರವರಿದ್ದಾರೆ. ಚಾಮರಾಜನಗರ ಜಿಲ್ಲೆಯ ರಾಮಸಮುದ್ರ, ಹೆಗ್ಗವಾಡಿ, ಮಸಗಾಪುರ, ಉಡಿಗಾಲ, ತೆರಕಣಾಂಬಿ, ಲಿಂಗನಪುರ, ತಾಳವಾಡಿ, ಕಾಡಳ್ಳಿ, ಬಸವನಪುರ ಇತ್ಯಾದಿ ಗ್ರಾಮಗಳಲ್ಲಿ ಮುಡುಕುತೊರೆ ಮಲ್ಲಿಕಾರ್ಜುನಸ್ವಾಮಿಯ ಒಕ್ಕಲಿನವರು ಎಂದು ಹೇಳಿಕೊಳ್ಳುವ ಗೊರವರು ನೆಲೆಸಿದ್ದಾರೆ. ಪ್ರತಿಯೊಬ್ಬ ಗೊರವಯ್ಯನು ತನ್ನ ಮೊದಲ ಮಗನಿಗೆ ದೀಕ್ಷೆ ಕೊಡಿಸುವುದರ ಮೂಲಕ ಸತ್ಸಂಪ್ರದಾಯ ಮುಂದುವರಿಸುತ್ತಾನೆ. ದೀಕ್ಷೆ ಪಡೆದ ಗೊರವಯ್ಯ ಮಾತ್ರ ಉಪದಾನ ಮಾಡಲು, ಶುಭಕಾರ್ಯಗಳನ್ನು ನಿರ್ವಹಿಸಲು, ನೃತ್ಯದಲ್ಲಿ ಪಾಲ್ಗೊಳ್ಳಲು ಹಕ್ಕು ಪಡೆದಿರುತ್ತಾನೆ.

ನೃತ್ಯಕ್ಕಾಗಿ ಗೊರವರು ಧರಿಸುವ ವೇಷಭೂಷಣಗಳು ಆಕರ್ಷಕವೂ, ಅರ್ಥಪೂರ್ಣವೂ ಆದದ್ದು. ಬಿಳಿ ದೋತಿಯ ಕಚ್ಚೆಪಂಚೆ, ಬಿಳಿ ಮುಂಗೈ ಶರ್ಟನ್ನು

ಧರಿಸಿ, ಶರ್ಟಿನ ಮೇಲೆ ಕರಿಕಂಬಳಿಯನ್ನು ಕತ್ತು ಬಳಸಿ ಇಳಿ ಬಿಡುತ್ತಾರೆ. ಸೊಂಟಕ್ಕೊಂದು ನಡುಪಟ್ಟಿ, ಕವಡೆಗಳಿಂದ ಅಲಂಕೃತಗೊಂಡ ಕೆಂಪು ಬಣ್ಣದ ಬನಾತು, ಕೊರಳಲ್ಲಿ ರುದ್ರಾಕ್ಷಿ ಮಾಲೆ, ತಲೆಗೆ ರುಮಾಲು, ರುಮಾಲಿನ ಮೇಲೆ ಹದಿನೈದು ಇಂಚು ಉದ್ದ ಮತ್ತು ಹನ್ನೆರಡು ಇಂಚು ಅಗಲದ ಕರಡಿ ಚರ್ಮದ ಕುಲಾವಿ, ನೊಸಲಲ್ಲಿ ಮೂರು ಪಟ್ಟೆಯ ವಿಭೂತಿ, ಎಡ ಬಗಲಲ್ಲಿ ಜೋಳಿಗೆ, ಎಡಗೈಯಲ್ಲಿ ಬಿದಿರಿನ ಪಿಳ್ಳಂಗೋವಿ, ಬಲಗೈಯಲ್ಲಿ ಮೇಕೆ ಚರ್ಮದಿಂದ ಗೊರವರಾಗಿ ಪಲ್ಲವಿಸುತ್ತಾರೆ. ಆನಪದ ರಾಯಭಾರಿಗಳಾಗಿ ಕಾಣಸಿಗುತ್ತಾರೆ.

ಹೀಗೆ ಗೊರವರು ಧರಿಸುವ ವೇಷಭೂಷಣಕ್ಕೆ ಪುರಾಣದ ಸಂಬಂಧವೊಂದನ್ನು ಸಾಮ್ಯತೆಗೊಳಿಸಿದ್ದಾರೆ. ಅದೇನೆಂದರೆ ಒಮ್ಮೆ ಕೈಲಾಸದಲ್ಲಿ ಶಿವ ಮತ್ತು ಪಾರ್ವತಿ ಪಗಡೆ ಆಡುತ್ತಾ ಲೋಕಾಭಿರಾಮನಾಗಿ ಮಾತನಾಡುತ್ತಿದ್ದಾಗ ಆಚಾನಕ್ಕಾಗಿ "ನಾನು ಧೈರ್ಯವಂತೆ, ಮೂರು ಲೋಕದಲ್ಲಿ ಏನೇ ಮಾಡಿದ್ರು ನನ್ನನ್ನು ಹೆದರಿಸುವುದಕ್ಕೆ ಯಾರಿಗೂ ಸಾಧ್ಯವಿಲ್ಲ. ನಾನು ಆದಿಶಕ್ತಿ.." ಅಂತೆಲ್ಲಾ ಜಂಭದ ಮಾತುಗಳನ್ನಾಡಿದಳಂತೆ ಪಾರ್ವತಿ. ಶಿವನು ಹೇಗಾದ್ರು ಮಾಡಿ ಪಾರ್ವತಿಗಿರುವ ಜಂಭ ಇಳಿಸ್ಬೇಕು ಅಂದುಕೊಂಡು ಮೌನಿಯಾದನಂತೆ. ದಿನಗಳುರುಳಿದಂತೆ ಶಿವನು ಒಮ್ಮೆ ಲೋಕಸಂಚಾರ ಮಾಡುತ್ತಿರುವಾಗ ಶಿವಗಣದವರು ಓಡಿ ಬಂದು "ಇಲ್ಲಿ ತಾರಕಾಸುರನ ಹಾವಳಿ ಹೆಚ್ಚಾಗಿದೆ. ಹೀಗೆ ಮುಂದುವರೆದರೆ ನರಮಾನವರಿಗೆ ಉಳಿಗಾಲವಿಲ್ಲ. ಪರಮೇಶ್ವರರಾದ ನೀವು ಬಂದು ನಮ್ಮನ್ನು ರಕ್ಷಣೆ ಮಾಡಬೇಕು" ಎಂದು ಕೇಳಿಕೊಂಡಾಗ ಶಿವನು ಸಮರ ಮಾಡಿ ತಾರಕಾಸುರನನ್ನು ಮಟ್ಟಹಾಕಿದನು.

ಅಷ್ಟರಲ್ಲಿ.... ಪಗಡೆ ಆಟವಾಡುತ್ತಿದ್ದಾಗ ಪಾರ್ವತಿ ಆಡಿದ ಜಂಭದ ಮಾತುಗಳು ನೆನಪಿಗೆ ಬಂದು ಅಲ್ಲೇ ಸತ್ತು ಬಿದ್ದಿದ್ದ ತಾರಕಾಸುರನ ಹಲ್ಲುಗಳನ್ನು ಕಿತ್ತು ಕವಡೆ ಮಣಿ ಮಾಡಿ, ಅವನ ತಲೆ ಚಿಪ್ಪನ್ನು ತೆಗೆದು ಡಮರುಗ ಮಾಡಿ, ಮೈಯ ಚರ್ಮ ಸುಲಿದು ಡಮರುಗ ಬಿಗಿದು, ನರಗಳಿಂದ ದಾರ, ಕತ್ತರಿಸಿದ ಬೆರಳಿಂದ ಗೊಂಡೆ ಮಾಡಿ, ಹುಲಿ ಚರ್ಮ ಉಟ್ಕಂಡು, ಜಾಂಬವನ ಕೂದಲ ತಲೆ ಮೇಲಿನ ಕುಲಾವಿ ಮಾಡಿಕೊಂಡು, ಪಿಳ್ಳಂಗೋವಿ ಊದುತ್ತ ಶಿವ ಕೈಲಾಸಕ್ಕೆ ಬಂದನಂತೆ. ಅರಮನೆ ಮುಂದೆ ನಿಂತು "ಭವತಿ ಭಿಕ್ಷಾಂದೇಹಿ" ಎನ್ನುತ್ತ ಡಮರುಗ ನುಡಿಸುತ್ತ ಶಿವನು ರೌದ್ರನಾಗಿ ಕುಣಿಯುತ್ತಿದ್ದರೆ, ನೋಡಿದ ಪಾರ್ವತಿ ಹೆದರಿ ನಡುಕಗೊಂಡಳು. ವೇಷ ತೆಗೆದ ಶಿವ, ಚಳಿ ಜ್ವರ ಬಂದು ಅವಿತುಕೊಂಡಿದ್ದ ಪಾರ್ವತಿಯ ಬಳಿ ಬಂದು ವಿಷಯ ತಿಳಿಸಿದನು. ಪಾರ್ವತಿಯ ಜಂಭ ಮುರಿದನು. ಈ ಪುರಾಣದ ಘಟನೆಯ

ಶಿವ ನೃತ್ಯ ಆಧರಿಸಿದ ವೇಷಭೂಷಣ, ಭಾವಾವೇಷ, ಉದ್ಗಾರಗಳು ಗೊರವರ ಕುಣಿತದ ಕೇಂದ್ರ ಬಿಂದು ಎನಿಸಿವೆ.

ಜನಪದೀಯ ಇನ್ನೊಂದು ಪ್ರಸಂಗದಂತೆ 'ಶಿವ ಜಾತಿಯೊಳಗೆ ಬೇಡನು, ಗಂಗೆ ಉತ್ತಮರ ಕುಲದವಳು. ಇವರಿಬ್ಬರ ನಡುವೆ ಪ್ರೇಮಾಂಕುರಿಸಿ ಬಿಟ್ಟಿರಲಾಗದಷ್ಟು ಬೆಸೆದುಕೊಂಡರು. ಮದುವೆಯಾಗಲು ಮುಂದಾದಾಗ ಗಂಗೆ ಹೆದರಿದಳು. ಅಣ್ಣಂದಿರ ಕೈಗೆ ಸಿಕ್ಕು ಆಗಬಹುದಾದ ಅನಾಹುತವನ್ನರಿತು, ಕೊನೆಗೊಮ್ಮೆ ಪರಶಿವನು ಗೊರವಯ್ಯನ ವೇಷ ತೊಟ್ಟು ಡಮರುಗ ನುಡಿಸುತ್ತಾ ತಂಡದ ಸಮೇತ ಗಂಗೆಯ ಮನೆ ಮುಂದೆ ಕುಣಿಯುತ್ತ ಉಪದಾನ ಕೇಳಿದನು. ಸ್ವಲ್ಪ ಸಮಯದ ನಂತರ ಭಿಕ್ಷೆ ನೀಡಲು ಬಂದ ಗಂಗೆಯನ್ನು ತನ್ನ ಮಡಿಲಲ್ಲಿರಿಸಿಕೊಂಡು ಕಾಲಿಗೆ ಬುದ್ದಿ ಹೇಳಿದನು. 'ಜನಪದರು ಹೇಳುವ ಈ ಕಥೆ ಗೊರವರ ಈಗಿನ ನೃತ್ಯ ಮತ್ತು ವೇಷಭೂಷಣಕ್ಕೆ ಸಾಮ್ಯತೆ ನೀಡುತ್ತದೆ.

ಅಪ್ಪಯ್ಯಗೌಡ, ಹಿರೇಪುಟ್ಟಮಲ್ಲೇಗೌಡ, ಚನ್ನಮಲ್ಲೇಗೌಡ, ಪುಟ್ಟಮಲ್ಲೇಗೌಡ ಹೀಗೆ ಸುಮಾರು ನಾಲ್ಕು ತಲೆಮಾರಿನಿಂದ ಈಚೆಗೆ ಜನ್ಮತಳೆದ ಗೊರವರ ಕಲೆ ಆರಂಭಕ್ಕೆ ಕೇವಲ ಹಾಡುವುದು, ಉಪದನ ಮಾಡುವುದಕ್ಕಷ್ಟೆ ಸೀಮಿತವಾಗಿತ್ತು. ಆದರೆ ಪುಟ್ಟಮಲ್ಲೇಗೌಡ ಅದನ್ನು ವಿಸ್ತರಿಸಿ ನೃತ್ಯವನ್ನು ಆಚರಣೆಗೊಳಿಸಿದರು.

ಕುರುಬ ಜನಾಂಗದಲ್ಲಿ ಮಾತ್ರ ಆಚರಣೆಯಲ್ಲಿರುವ ಗೊರವರ ನೃತ್ಯ ಕಲೆ ಅನ್ಯರಿಗೆ ವಿಸ್ತರಿಸಲ್ಪಡಬೇಕಾಗಿದೆ. ಚಾಮರಾಜನಗರ ಜಿಲ್ಲೆಯಲ್ಲಿ ಎರಡು ತಂಡಗಳು ಮಾತ್ರ ಅಸ್ತಿತ್ವದಲ್ಲಿದ್ದು ಒಂದು ಪುಟ್ಟಮಲ್ಲೇಗೌಡ ನೇತೃತ್ವದ ಶ್ರೀ ಮಲ್ಲಿಕಾರ್ಜುನಸ್ವಾಮಿ ಗೊರವರ ಕಲಾಸಂಘ, ಮತ್ತೊಂದು ಶ್ರೀ ಶಿವಮಲ್ಲೇಗೌಡ ನೇತೃತ್ವದ ಶ್ರೀ ಭಕ್ತಕನಕದಾಸ ಗೊರವರ ಕಲಾ ಸಂಘ. ಈ ಎರಡು ತಂಡಗಳೂ ರಾಮಸಮುದ್ರದಲ್ಲಿವೆ. ೧೯೯೧ರಲ್ಲಿ ರಾಜ್ಯೋತ್ಸವ ಪ್ರಶಸ್ತಿ, ೧೯೮೦ರಲ್ಲಿ ಜಾನಪದ ಮತ್ತು ಯಕ್ಷಗಾನ ಅಕಾಡಮಿ ಪ್ರಶಸ್ತಿ ಸೇರಿದಂತೆ ಹತ್ತು ಹಲವು ಗೌರವ, ಸನ್ಮಾನಗಳಿಗೆ ಭಾಜನರಾಗಿರುವ ಪುಟ್ಟಮಲ್ಲೇಗೌಡ ಮತ್ತು ಅವರ ತಂಡವು ಅಂಡಮಾನಿನ ಪೋರ್ಟ್‌ಬ್ಲೇರ್, ದೆಹಲಿ, ನಾಗಪುರ, ಪಾಲಕ್ಕಾಡು, ಬೆಂಗಳೂರು, ತಂಜಾಪೂರು, ಪಟ್ಟದ ಕಲ್ಲು, ಕಲ್ಬುರ್ಗಿ, ವೈನಾಡು, ಬಾಗಲಕೋಟೆ, ಗುಜರಾತ್ ಹೀಗೆ ರಾಷ್ಟ್ರಮಟ್ಟದ ಹಲವು ಉತ್ಸವಗಳಲ್ಲಿ ಭಾಗವಹಿಸಿ ಕೀರ್ತಿ ಗಳಿಸಿದೆ. ತಂಡದ ಮಾದೇಗೌಡ ಅವರಿಗೂ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯ ಗೌರವ ಸಂದಿದೆ.

ಶಿವಮಲ್ಲೇಗೌಡ ಅವರ ಭಕ್ತ ಕನಕದಾಸ ಕಲಾ ಸಂಘವು ಇತ್ತೀಚೆಗಷ್ಟೆ ಸಂಘಟಿತವಾಗಿದ್ದು, ತಂಜಾಪೂರು, ಬೆಂಗಳೂರು, ಮೈಸೂರು ದಸರಾ ಹೀಗೆ ಕೆಲವೊಂದು ಕಾರ್ಯಕ್ರಮದಲ್ಲಿ ಭಾಗವಹಿಸಿದೆ.

ಹಾಲುಮಣೆ ಸೇವೆ ಇವರ ಸಾಂಪ್ರದಾಯಿಕ ಕಾರ್ಯಕ್ರಮವಾಗಿದ್ದು, ಹರಕೆ ಹೊತ್ತವರ ಮನೆಯಂಗಳದಲ್ಲಿ ವಿಶಿಷ್ಟ ನೃತ್ಯ ಮಾಡಿ ಸತ್ಸಂಪ್ರದಾಯ ಮೆರೆಯುತ್ತಾರೆ. ಸೋಮೇಶ, ಮರಯ್ಯ, ಮಲ್ಲೇಗೌಡ, ಪುಟ್ಟಮಲ್ಲೇಗೌಡ, ಮಾದೇಗೌಡ, ಶಿವಮಲ್ಲೇಗೌಡ, ಚಿಕ್ಕಮಲ್ಲೇಗೌಡ, ಸಿದ್ದರಾಜು, ಮಾದೇವ, ಮಲ್ಲಣ್ಣ, ಶಿವಣ್ಣೇಗೌಡ, ಶಂಕರ, ನಾಗರಾಜು, ಗಿರೇಗೌಡ, ಲೋಕೇಶ, ಗಿರೀಶ, ಮಲ್ಲೇಶ, ಕರೀಗೌಡ, ಮಲ್ಲಯ್ಯ, ಸಿದ್ದು, ಆರ್.ಜಿ.ನಾಗರಾಜು, ಆರ್.ವಿ.ಶಿವಮಲ್ಲು ಗೊರವರ ಕುಣಿತದ ಪ್ರಮುಖ ಕಲಾವಿದರು.

**ಸೋಬಾನೆ ಪದ**

ಸಾಂಸ್ಕೃತಿಕ ಬದುಕ್ನು ಕಾವ್ಯರೂಪದಲ್ಲಿ ಕಟ್ಟಿಕೊಡುವುದು ನಮ್ಮವರಿಗೆ ಆದಿಯಿಂದಲೂ ರಕ್ತಗತವಾಗಿ ಬಂದ ಕಲೆ. ಪರಂಪರೆಯಲ್ಲಿ ಆಗಿ ಹೋದ ಮಾದೇಶ್ವರ, ಮಂಟಸ್ವಾಮಿ, ಬಿಳಿಗಿರಿರಂಗಸ್ವಾಮಿ, ಜುಂಜಪ್ಪ, ಮೈಲಾರಲಿಂಗ, ನಂಜುಂಡೇಶ್ವರ ಹೀಗೆ ಸಾಂಸ್ಕೃತಿಕ ನಾಯಕರ ಪವಾಡಮಯ ಬದುಕನ್ನು ಕಾವ್ಯರೂಪದಲ್ಲಿ ಕಟ್ಟಿಕೊಡುವ ನಮ್ಮ ಹಿರಿಯರು, ತಾವೇ ಸ್ವತಃ ಹಾಡಿ ಅವರ ಜೀವನ ಘಟನೆಗಳನ್ನು ಅನಾವರಣಗೊಳಿಸುತ್ತಾರೆ. ಮೌಖಿಕ ಪರಂಪರೆಯಿಂದ ಪ್ರವಹಿಸಿ ಬಂದ ಈ ಸಂಪತ್ತು ಇಂದಿಗೂ ಮೌಲಿಕವಾಗಿದೆ, ನಿರಂತರವಾಗಿದೆ.

ಸಾಂಸ್ಕೃತಿಕ ಉತ್ಸವ, ಹಬ್ಬಹರಿದಿನ, ಮದುವೆ, ಬೀಗರ ಔತಣ, ಹಸೆಮಣೆ ಪೂಜೆ, ದೇವರ ಉತ್ಸವ, ಕಂಕಣಧಾರಣೆ, ವಧುವರರಿಗೆ ಹರಿಶಿನ ಹಚ್ಚುವುದು, ಮೈ ತೊಳೆಯುವಾಗ–ಹೀಗೆ ಹಲವು ಸಂದರ್ಭಗಳಲ್ಲಿ ಸೋಬಾನೆ ಪದ ಹಾಡುವುದು ಪ್ರತೀತಿಯಲ್ಲಿದೆ: ಸೋಬಾನೆ ಪದ ಕೇಳಿಸದಿದ್ದರೆ ಏನೋ ಕೊರತೆಯಾಯಿತಲ್ಲ ಎಂಬಷ್ಟರ ಮಟ್ಟಿಗೆ ಬೆಸೆದುಕೊಂಡಿದೆ. ಬೇರೆಲ್ಲಾ ಜನಪದ ಹಾಡಿನ ಪ್ರಕಾರಗಳು ತಂಬೂರಿ, ಡೋಲು, ಓಲಗ, ದಮ್ಮಡಿ, ಕಂಸಾಳೆ ಇತ್ಯಾದಿ ಸಾಥಿಗಳ ನಾದದೊಂದಿಗೆ ಕೇಳುಗರನ್ನು ಮೋಡಿ ಮಾಡಿದರೆ, ಸೋಬಾನ ಪದಗಳು ವಾದ್ಯ ಪರಿಕರಗಳು ಮೇಳೈಸದೆ ಮಹಿಳೆಯರ ಕಂಚಿನ ಕಂಠದಿಂದ ಹೊರಹೊಮ್ಮಿ ಶುಭಕಾರ್ಯಗಳಿಗೆ ಜೀವಕಳೆ ತುಂಬುತ್ತವೆ.

ಶುಭ ಕಾರ್ಯಗಳಲ್ಲದೆ, ಹೊಲ ಗದ್ದೆಗಳಲ್ಲಿ ದುಡಿಯುವಾಗ, ರಾಗಿ ಬೀಸುವಾಗ, ಭತ್ತ ಕುಟ್ಟುವಾಗ, ಯಂತ್ರ ಮಾಡುವಾಗ ಮಹಿಳೆಯರಿಂದ ಪಲ್ಲವಿಸಿ ಬಿತ್ತರಗೊಳ್ಳುವ ಪದಗಳು ಅಮೂಲ್ಯ ಎನಿಸದಿರದು. ಬಿಸಿಲಿನ ಬೇಗೆ ದಣಿವು, ಹಸಿವು, ಸಂಕಟ ಇತ್ಯಾದಿಗಳನ್ನು ಮರೆತು ಕಾಲ ದೂಡಲು ಸಮರ್ಪಕ ಸಾಧನ ಸಂಸ್ಕೃತಿಯ ಸಿಂಚನ ತಾನೆ!

ಮುಖ್ಯ ಗಾಯಕಿಯೊಬ್ಬಳು ಅಲ್ಲಿ ನಡೆಯುತ್ತಿರುವ ಘಟನಾವಳಿಗಳನ್ನು ತನ್ನ ಗಾಯನ ಮುಖೇನ ನಿರೂಪಿಸುತ್ತ ಸಾಗಿದರೆ ಉಳಿದ ಇಬ್ಬರು ಮೂವರು ಶಿವ, ಪಾರ್ವತಿ, ನಾರಾಯಣ, ಮಹಶ್ವರರನ್ನು ನೆನೆಯುವ ಸೊಲ್ಲು ಹಾಕುತ್ತಾರೆ. ದೇವರ ಉತ್ಸವ, ಹಬ್ಬ, ಮದುವೆ ಎಲ್ಲಾ ಕಾರ್ಯಕ್ರಮಗಳಿಗೆ ವೈವಿಧ್ಯಮಯರಸವತ್ತಾದ ಸಾಹಿತ್ಯ ಮತ್ತು ರಾಗ ಗ್ರಾಮೀಣ ಮಹಿಳೆಯರ ಒಡಲಲ್ಲಿ ಹಪ್ಪುಗಟ್ಟಿದೆ. ಸಾಕ್ಷರರಲ್ಲದ ಈ ಜನವರ್ಗ ಮೌಖಿಕ ಪರಂಪರೆಯಿಂದಲೆ ಸೋಬಾನೆ ಪದ ಕಲೆಯನ್ನು ರಕ್ತಗತ ಮಾಡಿಕೊಂಡಿದ್ದಾರೆ.

ಜಿಲೆಯಾದ್ಯಂತ ಹಾಸುಹೊಕ್ಕಾಗಿರುವ ಸೋಬಾನೆ ಕಲಾವಿದರು ಈ ನೆಲದ ಸಾಂಸ್ಕೃತಿಕ ಜೀವನಾಡಿಗಳು. ದೊಡ್ಡರಾಯಪೇಟೆ ಸೋಬಾನೆ ನಿಂಗಮ್ಮ, ಕೊಳ್ಳೇಗಾಲದ ಸುಂದ್ರಮ್ಮ, ಪುಟ್ಟನಂಜಮ್ಮ, ಚಿಕ್ಕತಾಯಮ್ಮ, ಕುಂದಗೆರೆ ಗೋಪಮ್ಮ, ಪುಟ್ಟಮ್ಮ, ದೊಡ್ಡಮ್ಮ, ಸಣ್ಣಮ್ಮ, ಮಧುವನಹಳ್ಳಿ ಬಸಮ್ಮ, ಪುಟ್ಟನೀಲಮ್ಮ, ಕಿಲಗೆರೆ ದುಂಡಮ್ಮ, ಅಂಕಹಳ್ಳಿ ಗೋಪಮ್ಮ, ಪುಟ್ಟಬಸಮ್ಮ, ಹೊನ್ನಮ್ಮ, ರಾಘವಾಪುರ ಪುಟ್ಟಬಸಮ್ಮ, ಚಿಕ್ಕರುಪ್ಪೂರು ತಾಯಮ್ಮ, ಹನುಮಮ್ಮ, ಶಿವನಸಮುದ್ರ ಮಲ್ಲಾಜಮ್ಮ, ರಾಮಸಮುದ್ರ ಚಿಕ್ಕಬೀದಿಯ ಕರಗನಂಜಮ್ಮ, ಗಾಳಿಪುರ ತಾಯಮ್ಮ, ಉತ್ತುವಳ್ಳಿ ಮಹದೇವಮ್ಮ, ಗುಂಬಳ್ಳಿ ಗುರುಮಲ್ಲಮ್ಮ, ಚಾಮರಾಜನಗರ ಪರಂಜ್ಯೋತಿಪುರದ ಹನುಮಮ್ಮ, ಅಂಬಳೆ ಸಿದ್ದಮ್ಮ, ಜಾಲಹಳ್ಳಿ ಹುಂಡಿ ಗೌರಮ್ಮ, ಕೆಬ್ಬೇಪುರ ದೊಡ್ಡಮ್ಮ, ಸೋಮವಾರಪೇಟೆ ಚಿಂಕರಮ್ಮ, ಹರದನಹಳ್ಳಿ ಮನಿಯಮ್ಮ, ಬಿಸಿಲವಾಡಿ ಬಸಮ್ಮ, ಸುಬ್ಬಮ್ಮ ಇತ್ಯಾದಿ ಕಲಾವಿದರು ಸೊಬಾನೆ ಪದ ಹಾಡುವುದರಲ್ಲಿ ಸಾಕಷ್ಟು ಪ್ರಸಿದ್ದರಾಗಿದ್ದಾರೆ. ಸಾಂಸ್ಕೃತಿಕ ಸಮಾರಂಭದ ವೇದಿಕೆಯಲ್ಲೂ ಹಾಡಿ ತಮ್ಮ ಕಲಾ ನೈಪುಣ್ಯತೆ ಮೆರೆದಿದ್ದಾರೆ.

ಜಾನಪದ ಒಂದು ಮಹಾಸಾಗರ. ಪ್ರತಿ ಗ್ರಾಮಗಳಲ್ಲಿಯೂ ಸೋಬಾನೆ ಹಾಡುವ ಕಲಾವಿದರಿದ್ದು ಎಲ್ಲರ ಹೆಸರನ್ನು ಇಲ್ಲಿ ತರುವುದು ಕಷ್ಟದ ಕೆಲಸ. ಪದ

ಕಟ್ಟುವ ಮಹಿಳೆಯರು ಹೆಚ್ಚು ಹೆಚ್ಚು ಪ್ರವರ್ಧಮಾನಕ್ಕೆ ಬರಲಿ, ಗೌರವಗಳು ಅವರನ್ನು ಹರಸಿ ಹೋಗಲಿ.

## ಲಂಬಾಣಿ ನೃತ್ಯ

ಲಂಬಾಣಿ ಸಮುದಾಯ ಭಾರತದಾದ್ಯಂತ ಕಂಡುಬರುವ ಒಂದು ಅಲೆಮಾರಿ ಜನವರ್ಗ. ಎಲ್ಲಿ ನೆಲೆಯೂರಿದರಲ್ಲಿ ತನ್ನ ಸಂಸ್ಕೃತಿ ಸುಗಂಧದ ಸಿಂಚನಗೈದು ಮುನ್ನಡೆವ ಚಲನಶೀಲ ಬದುಕು. ಮೂಲತಃ ರಾಜಸ್ತಾನದವರಾದ ಲಂಬಾಣಿ ಜನರು ಬಂಜಾರ ಕುಲದ ವಿಶಿಷ್ಟ ಪರಂಪರೆ ಹಾಗೂ ಸಾಂಸ್ಕೃತಿಕ ಅದಮ್ಯತೆಯ ಶ್ರೀಮಂತ ಸಮುದಾಯ. ಸ್ಥಳೀಯವಾಗಿ ಅರಣ್ಯದಲ್ಲಿ ಸಿಗುವ ವಸ್ತುಗಳನ್ನು ಊರುಕೇರಿಗಳಲ್ಲಿ ಮಾರಾಟ ಮಾಡುತ್ತ ಕಾಡಿಗೂ, ನಾಡಿಗೂ ಸಂಪರ್ಕ ಬೆಳೆಸಿದವರು. ತಮ್ಮ ಕಾಯಕದ ಪರಿವೆಯಲ್ಲಿ ಭಾರತದ ನೆಲದುದ್ದಕ್ಕೂ ಚದುರಿಕೊಂಡವರು. ಕಾಲಾಂತರದಲ್ಲಿ ಮೂಲ ದುಡಿಮೆಯಿಂದ ದೂರ ಸರಿದು ಕೃಷಿ ಚಟುವಟಿಕೆಗಳತ್ತ ತೊಡಗಿಸಿಕೊಂಡು ಕರ್ನಾಟಕ, ಆಂಧ್ರಪ್ರದೇಶ ಇತ್ಯಾದಿ ರಾಜ್ಯಗಳಲ್ಲಿ ಬೇರು ಬಿಟ್ಟಿದ್ದಾರೆ.

ಕರ್ನಾಟಕದ ಬಳ್ಳಾರಿ, ಚಿಕ್ಕಮಗಳೂರು, ಚಾಮರಾಜನಗರ, ಮೈಸೂರು, ದಾವಣಗೆರೆ, ಉತ್ತರ ಕರ್ನಾಟಕ, ಶಿವಮೊಗ್ಗ, ಗುಲ್ಬರ್ಗಾ ಜಿಲ್ಲೆಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ನೆಲೆಸಿರುವ ಲಂಬಾಣಿ ಜನವರ್ಗ ಒಂದು ಕಾಲಕ್ಕೆ ಭೂಮಿಯ ಒಡೆತನವಿಲ್ಲದೆ ಸಂಕಷ್ಟದಲ್ಲಿದ್ದವರು. ಆರ್ಥಿಕ ಸ್ಥಿತಿ ಎಷ್ಟೇ ದುಸ್ತರವಾಗಿದ್ದರೂ ಅವರ ಸಾಂಸ್ಕೃತಿಕ ಬದುಕು ಶ್ರೀಮಂತವಾದುದು. ಹಬ್ಬ ಜಾತ್ರೆಗಳ ಸಂದರ್ಭದಲ್ಲಿ ಲಂಬಾಣಿ ಸಮುದಾಯದ ಆಚರಣೆಗಳು ವಿಶಿಷ್ಟ. ಅವರ ಸಾಂಸ್ಕೃತಿಕ ವೀರನಾದ ಸೇವಾಲಾಲನನ್ನು ನೆನೆಯುತ್ತ ಹಾಡುವ ಕಥನಕಾವ್ಯ ಒಂದು ಮಹಾಕಾವ್ಯವೇ ಸರಿ.

ರಾಥೋಡ ಮನೆತನ ಬಂಜಾರ ಕುಲದ ಭೀಮನಾಯಕ ಮತ್ತು ಧರ್ಮಿಣಿಯವರ ಮಗನಾದ ಸೇವಾಲಾಲ ಗೋವುಗಳನ್ನು ಕಾಯಲು ಅಡವಿಗೆ ಹೋಗುವುದು. ಒಮ್ಮೆ ಜೊತೆಗಿದ್ದ ಗೋಪಾಲಕರಿಗೆ ಹಸಿವಾಗಿ ತಿನ್ನಲು ಅನ್ನವಿಲ್ಲದಿದ್ದಾಗ ಕರಿ ಮಣ್ಣಿನಲ್ಲಿ ಹಳ್ಳದ ನೀರು ಹಾಕಿ ಶಿರಾ ತಯಾರಿಸುವುದು ಮತ್ತೊಂದು ದಿನ ಗೋವನ್ನು ಅಡವಿಯಲ್ಲಿ ಮೇಯಲು ಬಿಟ್ಟು ಕೊಳಲನು ನುಡಿಸುತ್ತ ಇದ್ದಾಗ ಜಗದಾಂಬ ಮುದುಕಿಯ ವೇಷದಲ್ಲಿ ಬಂದು ತನ್ನ ಭಕ್ತನಾಗಲು ಕೇಳಿದ್ದು, ಸೇವಾಲಾಲ ಒಪ್ಪದಿದ್ದಾಗ ಅವನಿದ್ದ ತಾಂಡಕ್ಕೆ ಮಹಾಮಾರಿ ರೋಗ ಬರುವಂತೆ ಮಾಡಿದ್ದು, ಸೇವಾಲಾಲನಿಗೆ ದಾರಿದ್ರ್ಯ ಅಂಕುರಿಸುವಂತೆ ಮಾಡಿದ ಶ್ರೀ ಜಗದಾಂಬ ಕಷ್ಟಗಳ ಮೇಲೆ

ಕಷ್ಟ ಕೊಟ್ಟು ಕೊನೆಗೂ ತನ್ನ ಭಕ್ತನಾಗಿಸಿಕೊಂಡಳು. ಈ ಪ್ರಸಂಗವನ್ನು ಕುರಿತು ಲಂಬಾಣಿ ಸಮುದಾಯ ಗಂಟೆಗಟ್ಟಲೆ ಗೀತೆಯನ್ನು ಹಾಡುತ್ತಾರೆ. ಮೂಲತಃ ಲಂಬಾಣಿ ಭಾಷೆಯಲ್ಲಿರುವ ಕಾವ್ಯ ಜನಪದ ಸಂಸ್ಕೃತಿಯ ಉದಾತ್ತತೆಯನ್ನು ಅಭಿವ್ಯಕ್ತಿಸುತ್ತದೆ.

ಜಗದಾಂಬ ರೂಪ ಬದಲಾನ
ಚಲಿ ಚಾರಿಚ ಭಾಯಾನ ಧೂಂಡೇನ।
ಭೀ ಮಾರೇ ಅಂಗಣೀಮ ಜಾನ
ಹೋಬರಗಿ ಜಗದಾಂಬನ ಆನ।

ಹಾಡುವುದು ಲಂಬಾಣಿ ವರ್ಗದ ಒಂದು ಜನಪದ ಪ್ರಕಾರವಾದರೆ, ಮತ್ತೊಂದು ಪ್ರಕಾರ ಜನಪದ ನೃತ್ಯ. ಲಂಬಾಣಿ ನೃತ್ಯ ಅಲ್ಲಿನ ಮಹಿಳೆಯರಿಗೆ ಮಾತ್ರ ಸಂಬಂಧಿಸಿದ್ದು, ಮುಂಗೈ ಮತ್ತು ಕಾಲುಗಳಿಗೆ ದಪ್ಪನೆಯ ಬೆಳ್ಳಿಯ ಕಡಗ, ಕಿವಿಗಳಲ್ಲಿ ಜೋತು ಬೀಳುವಷ್ಟು ಆಭರಣ. ರಕ್ತಕೆಂಪಿನ ಬನಾತು, ತುಂಬಿದ ನೆರಿಗೆಗಳಿಂದ ಕೂಡಿದ ತುಂಡುಲಂಗ, ಬನಾತು ಮತ್ತು ಲಂಗದ ಮೇಲೆ ಅಂಗೈಯಗಲ ಕನ್ನಡಿಗಳು ಹಾಗೂ ಅಡವಿಯಿಂದ ಸಂಗ್ರಹಿಸಿದ ಮಣಿಗಳ ಚಿತ್ತಾರ, ಕುತ್ತಿಗೆಯಲ್ಲಿ ಇಳಿಬಿಟ್ಟು ಆರೇಳು ಮಣಿಸರಗಳು, ತೋಳುಬಂದಿ, ಬೆರಳುಗಳಲ್ಲಿ ತಾಮ್ರ ಹಾಗೂ ಹಿತ್ತಾಳೆ ಒಡವೆ ಧರಿಸಿದ ಲಂಬಾಣಿ ಸ್ತ್ರೀಯರು ಆರ್ಭಟ, ಭಾವಾವೇಶಗಳಿಲ್ಲದೆ ನರ್ತಿಸುತ್ತಾರೆ. ಸಮೂಹ ಗಾಯನದಲ್ಲಿ ನಡುನಡುವೆ ಚಪ್ಪಾಳೆ ಹಾಕಿಕೊಳ್ಳುತ್ತ ಲಯಭರಿತವಾಗಿ ಗಂಟೆಗಟ್ಟಲೆ ಕುಣಿವ ಜನಪದರು, ತಮ್ಮ ಸಾಂಸ್ಕೃತಿಕ ನಾಯಕ ಸೇವಾಲಾಲನನ್ನು ನೆನೆದು ಹಾಡುವ ಕಥನ ಕಾವ್ಯ ಮೌಲಿಕ.

ಚಾಮರಾಜನಗರ ಜಿಲ್ಲೆಯ ಕೊಳ್ಳೇಗಾಲ ತಾಲ್ಲೋಕಿನ ದಿನ್ನಳ್ಳಿ, ಮಾರ್ಟಳ್ಳಿ ಚಾಮರಾಜನಗರ ತಾಲ್ಲೋಕಿನ ಬೂದಿಪಡಗ, ಕೋಳಿಪಾಳ್ಯ, ಮೂಕನಪಾಳ್ಯ, ಗೊಲ್ಲರ ದಿಂಬ, ವೀರಯ್ಯನಪುರ ಇತ್ಯಾದಿ ಊರುಗಳಲ್ಲಿ ಲಂಬಾಣಿ ಜನರು ತಳವೂರಿದ್ದಾರೆ. ಪ್ರಸ್ತುತ ಮೇಗ್ಯಾನಾಯ್ಕ ನೇತೃತ್ವದ ಚೇತನ ಹವ್ಯಾಸಿ ಕಲಾಬಳಗ ಹಾಗೂ ಲಕ್ಷ್ಮಣನಾಯ್ಕ ನೇತೃತ್ವದ ಸೇವಾ ಬಂಜಾರ ಕಲಾ ಸಂಘ ಜಾನಪದ ನೃತ್ಯಕ್ಕೆ ತಮ್ಮನ್ನು ತೆರೆದುಕೊಂಡು ಕಲಾತಂಡಗಳಾಗಿವೆ. ಲಕ್ಷ್ಮೀಬಾಯಿ, ರತ್ನಬಾಯಿ, ಮಾದೇವಿ ಬಾಯಿ, ರಮಾಬಾಯಿ, ತುಳಸಿಬಾಯಿ, ಲಂಬಾಣಿ ನೃತ್ಯದ ಪ್ರಮುಖ ಕಲಾವಿದರು.

## ಪಿನಾಸಿ ನೃತ್ಯ

ತಲತಲಾಂತರಗಳಿಂದಲೂ ಕಾಡಿನ ಒಳಗಿದ್ದು, ನಾಡಿನ ಸಂಪರ್ಕವನ್ನೆ ಕಾಣದ ನಿಸರ್ಗದ ಜೊತೆ ಅವಿನಾಭಾವ ಸಂಬಂಧ ಹೊಂದಿದ ಜನವರ್ಗ ಸೋಲಿಗರು.

ಗುಂಗುರು ಕೂದಲು, ಕುರುಚಲು ಗಡ್ಡ, ಕುಳ್ಳನೆಯ ದೇಹ, ದಪ್ಪ ತುಟಿ, ಅಗಲ ಮೂಗು ಹೊಂದಿರುವ ಸೋಲಿಗರು ಕಾಡು ಪ್ರಾಣಿಗಳನ್ನು ಬೇಟೆ ಮಾಡಿ ಆಹಾರ ಉತ್ಪಾದಿಸಿಕೊಳ್ಳುವುದಲ್ಲದೆ ಗೆಡ್ಡೆಗೆಣಸು ತಿಂದು ಜೀವಿಸುತ್ತ ಅಲೆಮಾರಿಗಳಾಗಿದ್ದವರು. ಅವರ ಬದುಕಿನ ಸಂಸ್ಕೃತಿ ನಾಡಿನ ಜನರಿಗಿಂತ ತೀರ ವೈರುಧ್ಯ. ಮಗುದಿನ ಜನನದ ನಂತರ ಬಳಕೆ ತೆಗೆಯುವಿಕೆ, ಋತುಮತಿಯಾದಾಗ, ಮದುವೆಯಾದಾಗ, ಶವ ಸಂಸ್ಕಾರ ಸಂದರ್ಭದ್ಲಿ ಸೋಲಿಗರು ಸಂಪ್ರದಾಯ ಮೆರೆಯುತ್ತಾರೆ. ಪಶ್ಚಿಮ ಘಟ್ಟವು ಕೊನೆಗೊಳ್ಳುವ ಬಿಳಿಗಿರಿರಂಗನಬೆಟ್ಟ, ಮಹದೇಶ್ವರ ಬೆಟ್ಟದ ಸಂಮೋಹಕ ದಟ್ಟಡವಿಯ ನಡುವೆ ಚದುರಿಕೊಂಡಿದ್ದ ಈ ಬುಡಕಟ್ಟು ಜನರು ಕಾಲ ಸರಿದಂತೆ ನಾಡಿನ ಸಂಪರ್ಕಕ್ಕೆ ಬಂದವರು. ಜೇನು ಹಳಿದು ತಂದು ಕಾಡಂಚಿನ ಗ್ರಾಮಗಳಿಗೆ ಮಾರಾಟ ಮಾಡುತ್ತ ನಾಡಿನ ಜನರ ಸಂಪರ್ಕ ಏರ್ಪಡಿಸಿಕೊಂಡವರು.

೧೯೮೦ಎಲದಲಿ ರೈಟ್ ಲೈವ್ಲಿ ಹುಡ್ ಪ್ರಶಸ್ತಿ ಪುರಸ್ಕೃತ ಸಾಮಾಜಿಕ ಕಾರ್ಯಕರ್ತ ಡಾ.ಸುದರ್ಶನ್ ಬಿಳಿಗಿರಿರಂಗನಬೆಟ್ಟಕ್ಕೆ ಕಾಲಿರಿಸಿ ಗಿರಿಜನರ ಸುಧಾರಣೆಗೆ ಅಡಿಯಿಟ್ಟ ಮೇಲೆ ಪೋಡುಗಳಲ್ಲಿ ನೆಲಸಿದರು. ಕುಟುಂಬದ ಸಂಖ್ಯೆ ಪೋಡುಗಳಲ್ಲಿ ಬೆಳೆದು ಊರುಗಳಾಗಿ ಪಲ್ಲವಿಸಿವೆ. ನಾಡಿನ ಆಧುನಿಕ ರಂಗಿನಾಟಕ್ಕೆ ಮನಸೋತ ಸೋಲಿಗ ಸಮುದಾಯ ತಮ್ಮ ಸಂಸ್ಕೃತಿಯನ್ನು ಕ್ರಮೇಣ ಕಳೆದುಕೊಳ್ಳುತ್ತಿದೆ.

ಸೋಲಿಗರ ಆರಾಧ್ಯದೈವ ಜಡೆಸ್ವಾಮಿ, ರಂಗಸ್ವಾಮಿ, ಮಾದೇಶ್ವರ ಇತ್ಯಾದಿ ಜಾತ್ರೆಗಳಲ್ಲಿ ಕೊಟ್ಟಿ ಹಬ್ಬದ ಸಂದರ್ಭದಲ್ಲಿ ಗಂಡಸರು, ಹೆಂಗಸರು ಎನದೆ ದೊಡ್ಡ ಸಂಪಿಗೆಯ ದಟ್ಟ ಅರಣ್ಯದಲಿ ರಾತ್ರೋರಾತ್ರಿ ಪಿನಾಸಿಯ ನಾದಕ್ಕೆ, ಡೋಲಾಕಿನ ತನನಕ್ಕೆ ಕುಣಿದು ಕುಪ್ಪಳಿಸುವ ಸೋಲಿಗರು ಎಂತಹರನ್ನು ಬೆರಗಾಗಿಸುತ್ತಾರೆ. ಪೂರ್ವದ ದಿನಗಳಲಿ ಮರದ ಎಲೆ ಹಾಗೂ ಹೂಗಳಿಂದ ಸಿಂಗರಿಸಿಕೊಂಡು ಗಿರಿಕಾನನ ತಣಿಸುವಂತೆ ನೃತ್ಯ ಮಾಡುತ್ತಿದ್ದ ಸೋಲಿನ ಸಮುದಾಯ ಕಾಲದೊಂದಿಗೆ ನಡೆದು ಸಾಗಿದ್ದಾರೆ. ಆಧುನಿಕತೆಯ ಬಿಸಿಗಾಳಿ ಅವರ ಮೈಮನಗಳನ್ನು ತಾಕಿದೆ. ಪ್ರಸ್ತುತ ಹೆಂಡ, ಸಾರಾಯಿಯಂತಹ ಕಳ್ಳು ಕುಡಿದು ಅಹೋರಾತ್ರಿ ಹೆಜ್ಜೆ ಇಡುವ ಸೋಲಿಗ ಬುಡಕಟ್ಟು ಜನವರ್ಗ ನೃತ್ಯದ ನಡುನಡುವೆ ಜಡೆಸ್ವಾಮಿ, ರಂಗಭಾವ, ಮಾದೇಶ್ವರ... ಹೀಗೆ

ಉದ್ಘಾರಗಳನ್ನು ಕೂಗುತ್ತಾರೆ. ವಾದ್ಯ ನುಡಿಸುವವರಿಗೆ ವಿರಾಮ ಕೊಟ್ಟು 'ಗೊರು ಗೊರುಕ ಗೊರುಕನ... ಗೊರು ಗೊರುಕ ಗೊರುಕನ...' ಎಂದು ಹಾಡಿಕೊಳ್ಳುತ್ತ ವೃತ್ತಾಕಾರದಲ್ಲಿ ನಿಂತು ಚಲಿಸುತ್ತಾ ಕುಣಿಯುತ್ತಾರೆ. ಅಪ್ಪಟ ಜನಪದ ಹೆಜ್ಜೆಗಳಾಕುತ್ತ ಇಳಿದು ಬರುವ ಬೆವರನ್ನು ಲೆಕ್ಕಿಸದೆ ಕೈಯಲ್ಲಿಡಿದ ಸೊಪ್ಪಿನ ಕೊನೆಯೊಂದಿಗೆ ಆಟಕ್ಕಿಳಿದ ಆದಿವಾಸಿ ಜನವರ್ಗ ನೋಡುಗರನ್ನು ರೋಮಾಂಚನಗೊಳಿಸುತ್ತಾರೆ.

ಜಿಲ್ಲೆಯಲ್ಲಿ ಸೋಲಿಗರು, ಬಡಗರು ಬೆಟ್ಟಗುಡ್ಡಗಳ ಆಸುಪಾಸಿನಲ್ಲಿ ನೆಲೆಸಿರುವ ಆದಿವಾಸಿ ಜನಾಂಗವಾಗಿದ್ದು, ಹಬ್ಬ ಹರಿದಿನಗಳಲ್ಲಿ ಅವರು ನೃತ್ಯ ಮಾಡುವ ಪರಿ ಪರಂಪತೆಯ ಮೂಲದೆಡೆಗೆ ಕರೆದೊಯ್ಯುತ್ತದೆ. ಕೊಂಬುಡಿಕೆ, ಯರಕನಗದೆ, ಮುನೇಶ್ವರ ಕಾಲೋನಿ, ರಂಗಸಂದ್ರ, ರಾಮಾಪುರ, ಆನೆಸಡ್ಡು, ಗೋತೆಮಡು, ಕಾಥೇಗಲ್ಲು, ಯತ್ತೇಗೌಡನ ದೊಡ್ಡಿ, ಮುರಟಿ ಪಾಳ್ಯ, ಕೆರೆದಿಂಬ, ಕನ್ನೇರಿ ಕಾಲೋನಿ, ಪುರಣಿಪೋಡು, ಬಂಗ್ಲೇಪೋಡು, ನೆಲ್ಲಿಕದಾರು, ಉದ್ದತ್ತಿ, ಹಿರಿಯಂಬಲ, ಸೀಗೆಬೆಟ್ಟು, ಮಂಜಿಗುಂಡಿ, ಗೊಂಬೆಗಲ್ಲು ಇತ್ಯಾದಿ ಪೋಡುಗಳಲ್ಲಿ ತಳವೂರಿರುವ ಸೋಲಿಗರು ಅವರ ಸಂಸ್ಕೃತಿ, ಕಲೆಯ ರಾಯಭಾರಿಗಳಾಗಿದ್ದಾರೆ. ಯರಕನಗದ್ದೆ ಕಾಲೋನಿಯ ಕುಸುಮಾಲೆ ಕಲಾ ತಂಡ, ಮುನೇಶ್ವರ ಕಾಲೋನಿಯ ರಂಗಸ್ವಾಮಿಯ ಕಲಾ ತಂಡ ನಿರಂತರವಾಗಿ ಸಂಸ್ಕೃತಿ ಪ್ರಸಾರಪಡಿಸುತ್ತಿರುವ ತಂಡಗಳಾಗಿವೆ. ಸಣ್ಣ ಮಾದೇಗೌಡ, ಬಸವರಾಜು, ಬೊಮ್ಮೇಗೌಡ, ಜಡೆಯಗೌಡ, ಶ್ರೀನಿವಾಸ, ಶಿವರಾಮು ಪಿನಾಸಿ ನೃತ್ಯದಲ್ಲಿ ನಿರತರಾಗಿರುವ ಪ್ರಮುಖರು.

## ಟಿಬೇಟಿಯನ್ ನೃತ್ಯ

ಟಿಬೇಟನ್ನು ಚೀನಾ ಆಕ್ರಮಣ ಮಾಡಿಕೊಂಡಾಗ ವಲಸೆ ಬಂದ ಟಿಬೇಟಿಯನ್ನರು ಭಾರತ ಸರ್ಕಾರದ ನಿರ್ದೇಶನದನ್ವಯ ಬೇರೆ ಬೇರೆ ಭಾಗಗಳಲ್ಲಿ ನೆಲೆಸಿದ್ದಾರೆ. ಚಾಮರಾಜನಗರ ಜಿಲ್ಲೆಯ ಕೊಳ್ಳೇಗಾಲ ತಾಲ್ಲೋಕಿನ ಒಡೆಯರ ಪಾಳ್ಯದಲ್ಲಿ ತಳವೂರಿರುವ ನೂರು ಕುಟುಂಬಗಳ ಒಂದು ಗುಂಪು ಅವರ ಜನಪದೀಯ ನೃತ್ಯವನ್ನು ಸಾಂಪ್ರದಾಯಿಕ ಉಡುಪು ಧರಿಸಿ, ವಾದ್ಯಪರಿಕರಗಳ ಸಾಥಿಗೆ ತಕ್ಕಂತೆ ನೋಡುಗನ ಮೈನವಿರೇಳುವಂತೆ ನರ್ತಿಸುತ್ತಾರೆ. ಜಿಲ್ಲೆಗೆ ಇದೊಂದು ವಿಶಿಷ್ಟವೂ, ಅಮೂಲ್ಯವೂ ಆದ ನೃತ್ಯ ಪ್ರಕಾರ. ನಮ್ಮ ನೆಲದ ಜಾನಪದ ಪ್ರಕಾರವಲ್ಲದಿದ್ದರೂ ನೃತ್ಯಭಂಗಿ, ವಿನ್ಯಾಸ ಸಂಸ್ಕೃತಿಯನ್ನು ಬಿಂಬಿಸುವಿಕೆ, ಸೌಜನ್ಯದ ಸಂಕೃತ, ಧೋಂಡೆಲಿಂಗ್ ಕಲಾ ತಂಡ ಜಿಲ್ಲೆಯಲ್ಲಿ ಟಿಬೇಟಿಕಯನ್ ನೃತ್ಯ ಸಾದರ ಪಡಿಸುವ ಏಕೈಕ ತಂಡ.

**ಕೋಲಾಟ**

ಯುವ ಸಮೂಹ ಕೋಲು ಹುಯ್ಯುತ್ತಾ ನರ್ತಿಸುವ ಸಾಹಸಮಯ ನೃತ್ಯ ಕೋಲಾಟ. ಸುಮಾರು ಹತ್ತು ಹನ್ನೆರಡು ಜನರ ಯುವ ಪಡೆ ಕಾಲಿಗೆ ಗೆಜ್ಜೆ ಕಟ್ಟಿ, ಎರಡು ಕೈಯಲ್ಲಿ ಕೋಲುಗಳನ್ನಿಡಿದು ವೃತ್ತಾಕಾರದಲ್ಲಿ ನಿಂತ ಸಾಹಸ ಪ್ರದಾನವಾಗಿ ಕೋಲಾಟ ಆಡುತ್ತಾರೆ. ಅವರಿಗೆ ಸಾಥಿ ನೀಡಲು ಹಾಡುತ್ತ ಡೋಲು, ಓಲಗ ತಾರಸಿ, ತಮಟೆ ನುಡಿಸುವ ಮತ್ತೊಂದು ಗುಂಪಿರುತ್ತದೆ. ಇಳಿದು ಬರುವ ಬೆವರನ್ನು ಲೆಕ್ಕಿಸದೆ ಕೋಲಾಟದಲ್ಲಿ ನಿರತರಾಗುವ ಕಲಾವಿದರು ಏಕಾತನತೆ, ತಾದಾತ್ಮತೆ ಇಲ್ಲದಿದ್ದರೆ ಕೋಲಿನ ಹೊಡೆತಗಳಿಂದ ರಕ್ತಸಿಕ್ತವಾಗುವುದು ಖಚಿತ.

ಸುಗ್ಗಿ, ಹಬ್ಬ ಹರಿದಿನಗಳಲ್ಲಿ ಕೋಲಾಟ ಆಡುವ ಗ್ರಾಮೀಣರು ಬಹಳ ಹಿಂದಿನಿಂದಲೂ ಉಳಿಸಿ, ಕಾಪಾಡಿಕೊಂಡು ಬಂದ ಕಲೆ ಕೋಲಾಟ. ಪ್ರಸ್ತುತವಾದಿ ಹೊಂಡರಬಾಳು ಶಿವಕುಮಾರ್, ಶಿವನಂಜಯ್ಯ, ಮಹದೇವಸ್ವಾಮಿ, ಕುಂತೂರು ದಿನೇಶ್‌ಕುಮಾರ್, ಮಂಟೇಪುರ ಸಿದ್ದರಾಜು, ಶಿವಲಿಂಗಯ್ಯ ಕಲಾವಿದರಿಂದ ಕೋಲಾಟ ಮುನ್ನಡೆಸಲ್ಪಡುತ್ತಿದೆ.

**ವೀರಗಾಸೆ**

ಕೈಲಾಸದಲ್ಲಿ ಶಿವನ ಪ್ರಸಂಗವೊಂದನ್ನು ಆಧರಿಸಿಕೊಂಡು ಆಚರಣೆಯಲ್ಲಿರುವ ವೀರಗಾಸೆ ಶುಭ ಕಾರ್ಯ, ಹಬ್ಬಹರಿದಿನ, ಉತ್ಸವಗಳಲ್ಲಿ ಹೆಚ್ಚು ಪ್ರಚಲಿತವಾಗಿತ್ತು. ಕಲಾವಿದರು ಕತ್ತಿ ಝಳಪಿಸುತ್ತ, ವೀರಭದ್ರನ ನೆನೆಯುತ್ತ ಹೆಜ್ಜೆ ಮೇಲೆ ಹಜ್ಜೆ ಹಾಕಿ ಸಾಗುವ, ನೆಗೆಯುವ, ಡೋಲು ಓಲಗದ ಸದ್ದಿಗೆ ನರ್ತಿಸುವ, ನಡುನಡುವೆ ವೀರಾವೇಶದಿ ವಚನ ನುಡಿಯುವ ಪುರಾಣ ಪ್ರಸಿದ್ಧ ಜನಪದ ಪ್ರಕಾರ ವೀರಗಾಸೆ. ಒಂದು ಕಾಲಕ್ಕೆ ಸಾಂಪ್ರದಯಿಕ ಮೆರವಣಿಗೆಗಳಲ್ಲಿ ಕಲೆಯ ಪ್ರಕಾರಗಳಲ್ಲೊಂದಾಗಿ ಮೈತಳೆದಿದೆ. ಹೆಚ್ಚು ಹೆಚ್ಚು ಜನಪ್ರಿಯವಾಗಿದೆ. ಡೋಲು, ಓಲಗದ ಸದ್ದಿಗೆ ಉದ್ಘರಿಸುತ್ತಾ ನೃತ್ಯ ಮಾಡುವ ಕಲಾವಿದರು ಸಂಸ್ಕೃತಿ ಬಿಂಬಿಸುವ ರಾಯಭಾರಿಗಳಾಗಿ ತಮ್ಮ ಕಲೆಯನ್ನು ವೈಭವಗೊಳಿಸುತ್ತಾರೆ.

ಮುಂಡಗುಂಡ ಚೆನ್ನಸ್ವಾಮಿ, ಬಿಸಿಲವಾಡಿ ಶಿವಣ್ಣ, ಗಂಗವಾಡಿ ಶಿವರುದ್ರಸ್ವಾಮಿ, ಮಲೆಯೂರು ರಾಜು ಜಿಲ್ಲೆಯ ಪ್ರಮುಖ ವೀರಗಾಸೆ ಕಲಾವಿದರು.

## ಮುಗಿಯುವ ಮುನ್ನ

ಚಾಮರಾಜನಗರ ಜಿಲ್ಲೆ ನಾಡಿನಲ್ಲೇ ಜನಪದ ಕಲೆಗಳ ಶ್ರೀಮಂತ ಜಿಲ್ಲೆ. ಇಲ್ಲಿನ ಜನಪದರು ಆರ್ಥಿಕವಾಗಿ ಸಬಲರಲ್ಲದಿದ್ದರೂ ರಕ್ತಗತವಾಗಿ ಬಂದಿರುವ ಕಲೆಯನ್ನು ಕಾಪಾಡಿಕೊಂಡು ಬಂದ ಸಾಂಪ್ರದಾಯಿಕ ಶರಣರು. ರಂಗುರಂಗಿನ ಆಧುನಿಕತೆಯ ಆರ್ಭಟದ ನಡುವೆಯೂ ತಮ್ಮ ಕಾಯಕದ ಜೊತೆ ಕಲೆಯನ್ನು ಮುಂದುವರೆಸಿಕೊಂಡು ಹೋಗುತ್ತಿರುವ ನಮ್ಮ ಗ್ರಾಮೀಣ ಜನವರ್ಗ ಸಂಸ್ಕೃತೀಯ ಪ್ರತೀಕ. ಅಖಂಡತೆಯ ಅನುರೂಪ. ಪ್ರತಿ ಊರುಗಳಲ್ಲಿ ಪ್ರತಿ ಮನೆಗಳಲ್ಲಿ ಯಾವುದಾದರೊಂದು ಪ್ರಕಾರ ಬಲ್ಲ ಕಲಾವಿದನಿದ್ದಾನೆ. ಕೆಲವರು ವೃತ್ತಿಯಾಗಿಸಿಕೊಂಡು ಮತ್ತೆ ಕೆಲವರು ಹವ್ಯಾಕವಾಗಿಸಿಕೊಂಡು ಸಂಸ್ಕೃತಿಯ ಕೊಂಡಿಗಳಾಗಿದ್ದಾರೆ, ಮತ್ತೆ ಕೆಲವರು ಉತ್ತಮ ಶೋತೃಗಳಾಗಿದ್ದಾರೆ.

ಇತ್ತೀಚೆಗೆ ತಮಟೆ ಮೇಳ, ಪೂಜಾ ಕುಣಿತ, ಮಾರಿ ಕುಣಿತ, ಡೋಲು ಕುಣಿತ, ವೀರಮಕ್ಕಳ ಕುಣಿತ, ಯಕ್ಷಗಾನ ಇತ್ಯಾದಿ ಕಲಾ ಪ್ರಕಾರಗಳನ್ನು ಅಭಿವ್ಯಕ್ತಿಸುವ ತಂಡಗಳು ಜಿಲ್ಲೆಯಲ್ಲಿ ಸಂಘಟನೆ ಗೊಂಡಿವೆ. ಜೋಗಿ ಪರಂಪರೆಯ ಕೊಂಬಿನ ಹೊನ್ನಯ್ಯ ಮನೆತನದ ಕಹಳೆ ಮಹದೇವಯ್ಯ ಇಂದಿಗೂ ತಮ್ಮ ಕಾಯಕ ಮುಂದುವರಿಸಿಕೊಂಡು ಹೋಗುತ್ತಿದ್ದಾರೆ. ಜಾನಪದ ಸಾಗರದಷ್ಟು ವಿಶಾಲವಾದ ಕ್ಷೇತ್ರ. ಈ ಪುಟ್ಟ ಲೇಖನದಿಂದ ಎಲ್ಲರನ್ನೂ ಸೆರೆ ಹಿಡಿಯುವುದು, ಸಂದು ಹೋದ ಹಿರಿಯರು, ಎಲೆಮರೆ ಕಾಯಿಯಂತಿರುವ ಅನೇಕಾನೇಕರನ್ನು ದಾಖಲಿಸುವುದು ಕಷ್ಟದ ಕೆಲಸ. ಈ ಲೇಖನ ಬಾಯಾರಿಕೆ ಎಂದವನಿಗೆ ಸಾಗರ ನೀರನ್ನು ಬೊಗಸೆಯಲ್ಲಿ ತಂದುಣಿಸಿ ದಷ್ಟು ಮಾತ್ರ!

*****

# ಅಧ್ಯಾಯ – ೪
# ಚಾಮರಾಜೇಶ್ವರ ದೇವಾಲಯದ ಹಿನ್ನೆಲೆ ಹಾಗೂ ಜಾತ್ರಾಮಹೋತ್ಸವ

ಚಾಮರಾಜನಗರದಲ್ಲಿ ಭವ್ಯವಾದ ಕಟ್ಟಡವೆಂದರೆ ಚಾಮರಾಜೇಶ್ವರ ದೇವಸ್ಥಾನ. ಚಿನ್ನದ ಹೊಳಪಿನ ಗೋಪುರದ ೫ ಕಲಶಗಳು ಬಹಳ ದೂರದವರೆಗೂ ಕಾಣಿಸುತ್ತವೆ. ೨೩೨ ೧೯೫ ವಿಸ್ತಾರ ಪ್ರದೇಶದಲ್ಲಿ ಊರಿನ ಕೇಂದ್ರದಲ್ಲಿರುವ ಚಾಮರಾಜೇಶ್ವರ ದೇವಸ್ಥಾನವನ್ನು ಸ್ಥಾಪಿಸಿದವರು ಮುಮ್ಮಡಿ ಕೃಷ್ಣರಾಜ ಒಡೆಯರು (೧೭೯೧–೧೮೬೮)

ಮುಮ್ಮಡಿ ಕೃಷ್ಣರಾಜ ಒಡೆಯರ ತಂದೆ ಚಾಮರಾಜೇಂದ್ರ ಒಡೆಯರ್‌ರವರು ೧೭೭೪ ರಲ್ಲಿ ಚಾಮರಾಜನಗರದಲ್ಲಿ ಜನಿಸಿದರು. ಆತ ಈ ಊರಿನ ಹೆಸರು ಅರಿಕುಠಾರ ಎಂದಿತ್ತು. (ಅರಿ ಎಂದರೆ ಶತ್ರು, ಕುಠಾರ ಎಂದರೆ ಕೊಡಲಿ. ಶತ್ರುಗಳಿಗೆ ಕೊಡಲಿ ರೂಪದಲ್ಲಿರುವವನು) ಅರಿಕುಠಾರ ಗ್ರಾಮ ಈಗಿನ ಖಾಸಗಿ ಬಸ್ ನಿಲ್ದಾಣ ಭುಜಂಗೇಶ್ವರ, ಲಕ್ಷ್ಮೀಕಾಂತ ಮತ್ತು ವೀರಭದ್ರೇಶ್ವರ ದೇವಸ್ಥಾನಗಳಿಗೆ ಹೊಂದಿಕೊಂಡಂತೆ ಮಾತ್ರವಿತ್ತು. ಅರಿಕುಠಾರ ಗ್ರಾಮಕ್ಕೆ ತಾಲ್ಲೂಕು ಕೇಂದ್ರ ಹೊಂಗನೂರಾಗಿತ್ತು. ತಮ್ಮ ತಂದೆಯ ನೆನಪಿಗಾಗಿ ಕೃಷ್ಣರಾಜ ಒಡೆಯರವರು ಊರಿನ ಹೆಸರನ್ನು ಚಾಮರಾಜನಗರವೆಂದು ಬದಲಾಯಿಸಿ ಇಲ್ಲಿ ಚಾಮರಾಜೇಶ್ವರ ದೇವಸ್ಥಾನವನ್ನು ಕಟ್ಟಿಸಿದರು.

ಚಾಮರಾಜನಗರದಲ್ಲಿ ಒಂದು ವಿಷ್ಣು ದೇವಾಲಯವನ್ನು ನಿರ್ಮಾಣ ಮಾಡಬೇಕೆಂದು ಯೋಚಿಸಿ ಖ್ಯಾತ ಶಿಲ್ಪಿಗಳೊಂದಿಗೆ ಸಮಲೋಚಿಸಿದಾಗ ಈ ಸ್ಥಳದಲ್ಲಿ ಶಿವ ದೇವಾಲಯ ನಿರ್ಮಿಸುವುದೇ ಸೂಕ್ತವೆಂದು ಚರ್ಚೆಯಲ್ಲಿ ತೀರ್ಮಾನವಾಗಿ ಆಗಿನ ಅರಮನೆಯ (ಜನನ ಮಂಟಪ) ಪೂರ್ವ ಭಾಗದಲ್ಲಿ ದ್ರಾವಿಡ ಶೈವಾಗಮ ಶಾಸ್ತ್ರ ರೀತ್ಯಾ ಅನುಸರಿಸಿ ೧೮೨೬ ರಲ್ಲಿ ಹೊಸದಾಗಿ ಶಿವಾಲಯ ನಿರ್ಮಾಣ ಮಾಡಿದರು. ಶಿವ ಪ್ರತಿಷ್ಠೆಗಾಗಿ ಕಾಶಿಯಿಂದ ತಂದ ಲಿಂಗವನ್ನು ಶೃಂಗೇರಿ ಮಠದಲ್ಲಿದ್ದ ರಕ್ತವರ್ಣದ ಅನಾದಿಯಾದ ನರ್ಮದಾ ಲಿಂಗವನ್ನು ಅನುಗ್ರಹಿಸಿ ಮಹಾರಾಜರ ಕೋರಿಕೆಯಂತೆ ರಾಜತ್ವ ಈಶ್ವರತ್ವಗಳ ಸಮ್ಮಿಲನದ ಕುರುಹಾಗಿ "ಚಾಮರಾಜೇಶ್ವರ" ಎಂಬ ನಾಮಧೇಯದಿಂದ ಪ್ರತಿಷ್ಠಿಸುವಂತೆಯೂ ಮತ್ತು ಊರಿಗೂ ಚಾಮರಾಜನಗರ ಎಂದು ನಾಮಕರಣ ಮಾಡುವಂತೆಯೂ ಅಶೀರ್ವದಿಸಿದರೆಂಬುದಾಗಿ ದೇವಾಲಯದ ಕೈಪಿಡಿ

೧೮೬೧, ೧೦, ೧೮ನೇ ತಾರೀಖಿನ ನಿರೂಪವೊಂದರಲ್ಲಿ ನಮೂದಿಸಿದ್ದು ಇದಕ್ಕಾಗಿ ಶೃಂಗೇರಿ ಮಠದಿಂದ ಒಂದು ರಥವನ್ನು ಸಹ ನೀಡಿದ್ದರೆಂದು ತಿಳಿದುಬರುತ್ತದೆ.

ಈಶ್ವರ ಪ್ರತಿಷ್ಠಾಪನಾ ನಂತರ ಮಹಾರಾಜರಿಗೆ ದಿನವೂ ಸ್ವಪ್ನವಾಗುತ್ತಿದ್ದ, ಆ ಸ್ವಪ್ನದಲ್ಲಿ ಸುಂದರಿಯಾದ ಬಾಲಕಿಯೊಬ್ಬಳು ಕಾಣಿಸಿಕೊಂಡು ತಾನು ಮೈಸೂರಿನ ಸೊಪ್ಪಿನ ಕೊಳದ ಬಳಿ ತೊಟ್ಟಲಲ್ಲಿ ಇರುವುದಾಗಿಯೂ ತನ್ನ ಕರೆದುಕೊಂಡು ಬರುವಂತೆ ಅಜ್ಞಾಪಿಸಿ ದಂತಾಗಿ ಸ್ವಪ್ನ ವೃತ್ತಾಂತವನ್ನು ಪರೀಕ್ಷಿಸಲು ಸದರಿ ಕೊಳದ ಬಳಿ ನೋಡಲು ಬಿಲ್ವಪತ್ರೆಯ ಮರದಡಿಯಲ್ಲಿ ಚತುರ್ಭುಜ ಮೂರ್ತಿಯಾಗಿ ದೊರೆತ ವಿಗ್ರಹಮೂರ್ತಿಯನ್ನು ತಮ್ಮ ಮಾತೃಶ್ರೀಯವರಾದ ಕೆಂಪನಂಜಮ್ಮಣ್ಣಿಯವರು ಕೋಟಿಗೌರಿ ಪಂಚಾಕ್ಷರಿಯನ್ನು ಜಪಿಸಿ ಮುಕ್ತಿಹೊಂದಿದ ಕುರುಹಾಗಿ ಅವರ ಹೆಸರಿನಲ್ಲಿಯೇ "ಕೆಂಪುನಂಜಾಂಬ" ಎಂಬ ಹೆಸರಿನಿಂದ ಪ್ರತಿಷ್ಠಾಪಿಸಿದರೆಂದು ಅರಮನೆಯ ವಂಶ ರತ್ನಾಕರದಲ್ಲಿ ನಮೂದಿತವಾಗಿರುತ್ತದೆ.

ಹಿಂದೆ ಕಂಠೀರವ ನರಸಿಂಹರಾಜ ಒಡೆಯರ್ ಸೆರೆಮರೆಯಲ್ಲಿ ಇರುವ ಸಂದರ್ಭದಲ್ಲಿ ಪಚ್ಚೆಕಲ್ಲು, ಚಾಮುಂಡೇಶ್ವರಿ ಹಾಗೂ ಅಂಬೆಗಾಲು ಕೃಷ್ಣ ಇವುಗಳನ್ನು ಪೂಜಿಸುತ್ತಿದ್ದರಂತೆ. ದೈವಕೃಪೆ ಹಾಗೂ ತಮ್ಮ ಸಾಹಸದಿಂದ ಕಲ್ಲಾವಣಿಯನ್ನು ತಲೆಯಿಂದ ಮೀಟಿ. ಸೆರೆಮನೆಯಿಂದ ತಪ್ಪಿಸಿಕೊಂಡರಂತೆ. ಆ ಕಾರಣ, ಸದರಿ ಚಾಮುಂಡಿ ವಿಗ್ರಹವನ್ನು ಧಾರವಾಡದಿಂದ ತಂದು ಪ್ರತಿಷ್ಠಾಪಿಸಿರುವುದಾಗಿ ತಿಳಿದುಬರುತ್ತದೆ. ಅಷ್ಟಭುಜಗಳಿಂದ, ತ್ರಿಶೂಲ, ಶಂಖ, ಚಕ್ರ, ಧನುಂ, ಖೇಟ, ಕೇಶ, ಚಾಣ, ವಜ್ರ, ಹಸ್ತದಿಂದ ಕೂಡಿದ ಚಂಡ, ಮುಂಡ, ಮಹಿಷಾಸುರ ಮರ್ಧಿನಿ, ಸಿಂಹಾವಾಹಿನಿಯಾಗಿ ಜ್ವಾಲಪ್ರಭಾವಲಯದಿಂದ ಕೂಡಿದ್ದು, ವಂಶಪಾರಂಪರ್ಯ ಅರ್ಚನಾ ಪದ್ದತಿಗೆ ವಿಶೇಷ ಅಲಂಕಾರಗಳಿಗೆ ಹೆಸರುವಾಸಿಯಾಗಿದ್ದು, ಆಷಾಢಮಾಸದಲ್ಲಿ ವೈಭವದಿಂದ ಕೂಡಿ, ಪ್ರತಿ ಶುಕ್ರವಾರ ಮಂಗಳವಾರಗಳಲ್ಲಿ ಅಮಾವಾಸ್ಯೆ ಪೂರ್ಣಿಮ ದಿನಗಳಲ್ಲಿ ಹೆಚ್ಚಿನ ಭಕ್ತರು ಆರಾಧ್ಯ ದೈವವಾಗಿ ಚಾಮರಾಜೇಂದ್ರ ದಿನಗಳಲ್ಲಿ ಹೆಚ್ಚಿನ ಭಕ್ತರು ಆರಾಧ್ಯ ದೈವವಾಗಿ ಚಾಮರಾಜೇಂದ್ರ ಒಡೆಯರ್, ಶೃಂಗೇರಿ ಸ್ವಾಮಿಗಳು ಹಾಗೂ ಯದುಕುಲದ ಅರಸರಲ್ಲದೆ ಮಿಲಿಟರಿ, ಹವಲ್ದಾರರ ನಂತರ ಮೇಲಿನ ಇಲಾಖಾಧಿಕಾರಿಗಳ ಚಿನ್ನದ ಆಭರಣಗಳು ಹಾಗೂ ರಜತಮಯ ಕವಚಗಳನ್ನು ಸಮರ್ಪಿಸಿ ಆರಾಧಿಸಿದ ಆರಾಧ್ಯ ದೈವಿ ಸ್ವರೂಪಳು. ಈ ಸನ್ನಿಧಿಯಲ್ಲಿರುವ ಪಚ್ಚೆಕಲ್ಲು ಚಾಮುಂಡೇಶ್ವರಿಯು, ಆಚಿಜನೇಯ ಮತ್ತು

ನರಸಿಂಹದೇವರು ಇದನ್ನು ಪುಷ್ಟೀಕರಿಸುವ ಮೂರ್ತಿಯಾಗಿದ್ದು, ಅರಮನೆಯ ವಂಶಾವಳಿಯಲ್ಲಿ ಈ ವಿಚಾರಗಳು ಅಂಕಿತಗೊಂಡಿರುವುದಾಗಿ ಹಿರಿಯ ತಲೆಮಾರಿನವರು ತಿಳಿಸುತ್ತಾರೆ.

ಚಾಮರಾಜ ಒಡೆಯರರು ಹುಟ್ಟಿದ ಅರಮನೆಯ ಒಂದು ಭಾಗ ಜನನಮಂಟಪ ಈಗಲೂ ಖಾಸಗಿ ಬಸ್ ನಿಲ್ದಾಣದ ಮುಂದಿದೆ. ಈ ಸ್ಮಾರಕ ದುಸ್ಥಿತಿಯಲ್ಲಿದೆ. ಅಲ್ಲೊಂದು ಅರಮನೆಯು ಇತ್ತೆಂದು ನಮಗೆ ತಿಳಿಸುವುದಕ್ಕೆ ಈಗ ಒಂದೆರಡು ಹೆಸರುಗಳು ಉಳಿದಿವೆ. ಅರಮನೆಯ ಚಮಾಲ್ (ತೋಟ) ಇದ್ದ ಜಾಗದಲ್ಲಿ ಈಗ ಚಮಾಲ್ ಬೀದಿಯಿದೆ. (ಖಾಸಗಿ ಬಸ್ ನಿಲ್ದಾಣ ಮತ್ತು ವೀರಭದ್ರೇಶ್ವರ ದೇವಸ್ಥಾನಗಳ ನಡುವಣ ಎರಡು ಅಡ್ಡ ಬೀದಿಗಳು) ನಗಾರಿ ಮತ್ತಿತರ ವಾದ್ಯಗಳನ್ನು ಇರಿಸಿದ್ದ ಸ್ಥಳದಲ್ಲಿ ನಗರ್ ಖಾನೆ ಬೀದಿ ಇದೆ. (ಕೃಷ್ಣ ಚಿತ್ರಮಂದಿರದ ಪೂರ್ವಕ್ಕಿರುವ ಬೀದಿ) ಅರಮನೆಯೆಂದರೆ ಬಹುಶಃ ಮಹಾರಾಜರು ಇಲ್ಲಿಗೆ ಬಂದಾಗ ಇಳಿದುಕೊಳ್ಳಲಿಕೆ ಕಟ್ಟಿದ ಮನೆ ಎಂದು ಭಾವಿಸಬೇಕೇ ಹೊರತು, ಮೈಸೂರಿನ ಅರಮನೆಯಂಥ ವಿಶಾಲ ಭವನವಲ್ಲ.

ವಿಗ್ರಹಗಳ ಬಗೆಗೆ ಸ್ಥಳ ಪುರಾಣಗಳು ವೈಭವೀಕರಿಸಿ ಅದರಲ್ಲೇನೋ ಅದ್ಭುತ, ನಿಗೂಢವಿರಬಹುದು ಎಂಬಂತೆ ಹೇಳುತ್ತವೆ. ಆದರೆ ಈ ವಿಗ್ರಹಗಳು ಶಿಲ್ಪಿ ಸಿದ್ದಲಿಂಗ ಸ್ವಾಮಿಯವರ ಪೂರ್ವಜರು ಮಾಡಿಸಿಕೊಟ್ಟರೆಂದು ಚರಿತ್ರೆಯ ಸಂಶೋಧಕರು ಹೇಳುತ್ತಾರೆ. ಹಾಗೆಯೇ ಈ ದೇವಸ್ಥಾನ ಹಿಂದೆಯ ಇತ್ತು. ಇದನ್ನು ಕೃಷ್ಣರಾಜ ಒಡೆಯರವರು ಜೀರ್ಣೋದ್ಧಾರ ಮಾಡಿದರು ಎಂದು ಸಂಶೋಧಕರು ಅಭಿಪ್ರಾಯ ಪಡುತ್ತಾರೆ.

ದೇವಸ್ಥಾನದ ಮಹಾದ್ವಾರ ಪೂರ್ವಕ್ಕಿದೆ. ದಪ್ಪ ಬಾಗಿಲುಗಳಿಗೆ ಹಿತ್ತಾಳೆ ವಾಡಹಾಕಿದ್ದಾರೆ. ೫ ಅಂತಸ್ತಿನ ಗೋಪುರವಿದೆ. ಅದರ ಮೇಲೆ ೫ ಸುಂದರ ಚಿನ್ನದ ರಂಗಿನ ಕಲಶಗಳಿವೆ. ಪ್ರವೇಶ ಮಾರ್ಗದ ಎಡದಲ್ಲಿ ಗಣಪತಿ ಮತ್ತು ಬಲದಲ್ಲಿ ಚಾಮುಂಡೇಶ್ವರಿಯ ಕೆತ್ತನೆಗಳಿವೆ.

ದೇವಸ್ಥಾನ ಪ್ರವೇಶ ಮಾಡಿದಾಗ ಈಶ್ವರನಿಗೆ ಮುಖ ಮಾಡಿ ಕುಳಿತಿರುವ ಬಸವನಿದ್ದಾನೆ. ಇದನ್ನು ಗಾರೆಯಿಂದ ಮಾಡಿದ್ದು, ಲೋಹದ ಕವಚ ತೊಡಿಸಿರುತ್ತಾರೆ. ಇದರ ಮುಂದೆ ಹಿತ್ತಾಳೆ ಕವಚ ಹಾಕಿದ ಧ್ವಜಸ್ತಂಭವಿದೆ.

ದೇವಸ್ಥಾನದ ಪ್ರಾಕಾರದಲ್ಲಿ ದಕ್ಷಿಣದಲ್ಲಿ ೬೪ ಪುರಾತನ ಭಕ್ತರ ವಿಗ್ರಹಗಳಿವೆ. ಪಶ್ಚಿಮದಲ್ಲಿ ಸಹಸ್ರಲಿಂಗ. ಉತ್ತರದಲ್ಲಿ ಈಶ್ವರನ ಪಂಚವಿಂಶತಿ ಲೀಲೆ ವಿಗ್ರಹಗಳಿವೆ. ಈಶಾನ್ಯದಲ್ಲಿ ಯಾಗಶಾಲೆ ಆಗ್ನೇಯದಲ್ಲಿ ಪಾಕಶಾಲೆಗಳಿವೆ.

ಪ್ರದಕ್ಷಿಣೆ ಬಂದು ಈಶ್ವರನ ದೇವಸ್ಥಾನದ ಒಳ ಹೊಕ್ಕಾಗ ನವರಂಗದಲ್ಲಿನ ಸ್ವಪನ ಗಣಪತಿ ಮತ್ತು ಪ್ರತ್ಯೇಕ ಗುಡಿಗಳಿರುವ ೬ ಲಿಂಗಗಳಿವೆ. ದಕ್ಷಿಣಾಭಿಮುಖವಾಗಿ ಶ್ರೀ ಪಾರ್ವತೀ ಸಮೇತ ಚಂದ್ರಶೇಖರ ಸ್ವಾಮಿಗಳ ಉತ್ಸವ ಮೂರ್ತಿಯಿದೆ.

ಹೊರಗೆ ಪ್ರಾಕಾರದಲ್ಲಿ ಈಶ್ವರ ಪಾರ್ವತಿಯವರ ಗುಡಿಗಳ ಹಿಂಭಾಗದಲ್ಲಿ ಶ್ರೀದೇವಿ ಭೂದೇವಿ ಸಮೇತ ನಾರಾಯಣ ಸ್ವಾಮಿಯವರ ಗುಡಿಯಿದೆ. ದೇವಸ್ಥಾನಕ್ಕೆ ಬಂದ ಭಕ್ತರು ಎಲ್ಲ ದೇವರುಗಳ ದರ್ಶನ ಮಾಡಿದ ಅನಂತರ ಕೊನೆಯಲ್ಲಿ ಚಂಡಿಕೇಶ್ವರನ ಬಳಿಗೆ ಬಂದು ತಾವು ಮಾಡಿದ ದರ್ಶನದ ವರದಿಯನ್ನು ಒಪ್ಪಿಸಬೇಕು. ಹಾಗೆ ಮಾಡಿದರೆ ಮಾತ್ರ ಅವರಿಗೆ ಶಿವಸವೆಯ ಫಲ ಸಿಕ್ಕುತ್ತದಂತೆ. ಮುಮ್ಮಡಿ ಕೃಷ್ಣರಾಜ ಒಡೆಯರವರು ತಮ್ಮ ಮೂವರು ಹೆಂಡತಿಯರೊಡನೆ ಕೈ ಜೋಡಿಸಿ ನಿಂತಿರುವ ಶಿಲಾಪ್ರತಿಮೆಗಳನ್ನು ಸ್ಥಾಪಿಸಿದ್ದಾರೆ. ಇದಕ್ಕೆ ಖಾಸಾಭಕ್ತರ ಪ್ರತಿಮೆಗಳೆಂದು ಕರೆಯುತ್ತಾರೆ.

ದೇವಸ್ಥಾನದಲ್ಲಿ ಪ್ರತಿಷ್ಠಾಪಿತವಾಗಿರುವ ವಿಗ್ರಹಗಳು ಸರಮಾಲೆಯಲ್ಲಿ ಇತ್ತೀಚೆಗೆ ಸೇರ್ಪಡೆಯಾದುವುಗಳೆಂದರೆ ನವಗ್ರಹಗಳು. ಈಶ್ವರನ ದೇವಸ್ಥಾನದ ಮುಂಭಾಗದಲ್ಲಿ ೧೯೬೨ರಲ್ಲಿ ಶ್ರೀ ಚಾಮರಾಜೇಂದ್ರ ಒಡೆಯವರು ಆಗಮಯುಕ್ತವಾಗಿ ನವಗ್ರಹಗಳನ್ನು ಪ್ರತಿಷ್ಠಾಪನೆ ಮಾಡಿದರು. ಶನಿವಾರ ಅಮಾವಾಸ್ಯೆಗಳಲ್ಲಿ ಇಲ್ಲಿಗೆ ಹೆಚ್ಚು ಭಕ್ತರು ಬರುತ್ತಾರೆ.

ದೇವಸ್ಥಾನದ ಗರ್ಭಗುಡಿ ಅಂತರಾಳ, ನವರಂಗ ಮುಖ ಮಂಟಪ ನಂದಿಮಂಟಪ ಮಹಾದ್ವಾರ ಇವುಗಳೆಲ್ಲವೂ ಆಗಮೋಕ್ತವಾಗಿ ವಿನ್ಯಾಸಗೊಂಡಿವೆ. ವಿಮಾನ (ಗರ್ಭ ಗುಡಿಯ ಮೇಲಿನ ಗೋಪುರ) ಮತ್ತು ಮಹಾದ್ವಾರದ ಗೋಪುರದ ವಿನ್ಯಾಸ ಹೊಯ್ಸಳರ ಶೈಲಿಯನ್ನು ಅವಲಂಬಿಸಿದೆ. ದೇವಾಲಯದ ಪ್ರಾಕಾರಗಳು ಇತರ ಗುಡಿಗಳು ಮತ್ತು ಶಾಲದಿಗಳು ಶಿಲ್ಪ ಶಾಸ್ತ್ರದ ರೀತ್ಯಾ ನಿರ್ಮಿಸಲ್ಪಟ್ಟಿವೆ. ಆಯಾವರ್ಗಗಳನ್ನು ಶಿಲ್ಪ ಶಾಸ್ತ್ರದ ರೀತ್ಯಾ ವಿನ್ಯಾಸಿಸಿ ವಾಸ್ತು ಪುರುಷ ಮಂಡಲವನ್ನು ಗಣನೆಗೆ ತೆಗೆದುಕೊಂಡಿರುವುದು ಗಮನಾರ್ಹವಾಗಿದೆ. ದೇವಾಲಯದ ಸುತ್ತ

ದೇವಕೋಷ್ಠಗಳು ಹಾಗೂ ಅವುಗಳಲ್ಲಿರುವ ದೇವತಾಮೂರ್ತಿಗಳು ಶೈವಾಗಮೋಕ್ತವಾಗಿದೆ.

ಚಾಮರಾಜೇಶ್ವರ ದೇವಸ್ಥಾನ ಬೇಲೂರು ಹಳೇಬೀಡಿನ ದೇವಾಲಯಗಳಂತೆ ಕಲೆಯ ತೌರೂರಲ್ಲ. ತಮಿಳುನಾಡಿನ ದೇವಾಲಯಗಳಂತೆ ವಿಶಾಲವಾಗಿಯೂ ಇಲ್ಲ. ಇಲ್ಲಿನ ಕಂಬಗಳಲ್ಲಿ ಕೆತ್ತನೆಗಳಿದ್ದರೂ ಅವುಗಳ ಕಲೆ ಹೇಳಿಕೊಳ್ಳುವಂಥ ಮಟ್ಟದ್ದಲ್ಲ. ಇಲ್ಲಿನ ಕಂಬಗಳನ್ನು ನೋಡುತ್ತ ಹೋದಂತೆ ಒಂದು ಕುತೂಹಲ ಸಂಗತಿ ಗಮನಕ್ಕೆ ಬರುತ್ತದೆ. ಹಲವಾರು ಕಂಬಗಳ ಮೇಲಿರುವ ಕೆತ್ತನೆಗಳು ಶಂಖ, ಚಕ್ರ, ಗರುಡ ವಿಷ್ಣು ದೇವಾಲಯದಲ್ಲಿ ಇರಬೇಕಾದವು. ಈಶ್ವರನ ದೇವಸ್ಥಾನವಾದ ಇಲ್ಲಿಗೆ ಹೇಗೆ ಬಂದವು ಎಂಬ ಪ್ರಶ್ನೆ ಮೂಡುತ್ತದೆ. ಹಾಗೆಯೇ ಇನ್ನೊಂದು ವಿಷಯವೆಂದರೆ ಹಲವಾರು ಕಂಬಗಳು ಈ ದೇವಸ್ಥಾನಕ್ಕಾಗಿಯೇ ಮಾಡಿಸಿದವು ಎಂದು ಹೇಳುವಂತಿಲ್ಲ. ಕಂಬಗಳ ಯದ್ವಾ ತದ್ವಾ ಕತ್ತರಿಸಿ ಹಾಕಿರುವುದು ಕಂಡು ಬರುತ್ತದೆ. ಉದಾಹರಣೆಗೆ ಈಶ್ವರನ ದೇವಸ್ಥಾನದಲ್ಲಿರುವ ಕಂಬಗಳ ಮೇಲ್ತುದಿಯಲ್ಲಿ ಆಂಜನೇಯ ನರಸಿಂಹ ಮುಂತಾದವುಗಳ ಕೆತ್ತನೆ ಮೂಡಿ ಬಂದಿದೆ. ಆದರೆ ಅವುಗಳು ಪೂರ್ತಿ ಚಿತ್ರ ಅಲ್ಲಿಲ್ಲ. ಅವುಗಳ ತಲೆ ಕತ್ತರಿಸಿ ಕಂಬದ ಉದ್ದವನ್ನು ಕಡಿಮೆ ಮಾಡಿ ಛಾವಣಿ ಕಲ್ಲು ಜೋಡಿಸಿದ್ದಾರೆ. ಹೀಗೆ ಕಂಬಗಳ ಮೇಲ್ತುದಿಯನ್ನು ನೋಡುತ್ತ ಹೊರಟರೆ ನೀವು ಹಲವಾರು ತಲೆಕತ್ತರಿಸಿದ, ಹೊಟ್ಟೆ ಕತ್ತರಿಸಿದ ಕೆತ್ತನೆಗಳನ್ನು ಕಾಣುವಿರಿ.

ಮೇಲಿನ ಎರಡು ಅಂಶಗಳನ್ನು ಗಮನಿಸಿದಾಗ ಈ ಕಂಬಗಳು ಬಹುಶಃ ಹತ್ತಿರದಲ್ಲಿದ್ದ, ಯಾವುದೋ ಕಾರಣಕ್ಕಾಗಿ ಪಾಳು ಬಿದ್ದಿದ್ದ, ವಿಷ್ಣು ದೇವಾಲಯದಲ್ಲಿದ್ದು ಅದನ್ನು ಇಲ್ಲಿಗೆ ತಂದು ಜೋಡಿಸಿರಬಹುದು ಎಂದು ಅನಿಸುತ್ತದೆ. ಹಾಗೆ ಜೋಡಿಸುವಾಗ ಕೆಲ ಕಂಬಗಳ ಉದ್ದ ಹೆಚ್ಚಾಗಿದ್ದದ್ದು ಕಂಡು ಬಂದು ಅವುಗಳನ್ನು ಕಡಿಮೆ ಮಾಡಲು ತುದಿ ಕತ್ತರಿಸಿರಬಹುದು ಎಂದು ಅನ್ನಿಸುತ್ತದೆ.

ಹೀಗೆ ಪಾಳುಬಿದ್ದ ದೇವಸ್ಥಾನಗಳಿಂದ ಕಂಬಗಳು ಮೂರ್ತಿಗಳನ್ನು ತಂದು ಅವುಗಳನ್ನು ಸಂರಕ್ಷಿಸುವ ಮತ್ತು ಮಿತವ್ಯಯದ ಉದ್ದೇಶಗಳಿಂದ, ಜೀರ್ಣೋದ್ಧಾರ ಮಾಡಿದ ದೇವಸ್ಥಾನಗಳಲ್ಲಿ ಇರಿಸುವ ಸಂಪ್ರದಾಯ ನಡೆದು ಬಂದಿದೆ. ಇದೇ ರೀತಿ ಚಾಮರಾಜೇಶ್ವರ ದೇವಸ್ಥಾನಕ್ಕೆ ತೆರಕಣಾಂಬಿ ಮತ್ತು ಶ್ರೀ ರಂಗಪಟ್ಟಣ ತಾಲ್ಲೂಕಿನ ಬಲಮುರಿ ದೇವಸ್ಥಾನಗಳಿಂದ ಪ್ರತಿಮೆಗಳನ್ನು ತಂದು ಇರಿಸಿರುವುದಾಗಿ ಈ ದೇವಸ್ಥಾನದ ಮಾನ್ಯುಯಲ್ ತಿಳಿಸುತ್ತದೆ. ಚಾಮರಾಜೇಶ್ವರ ದೇವಸ್ಥಾನದಲ್ಲಿ

ನೋಡಲೇಬೇಕಾದ ಚಿತ್ರ ಸಂಪತ್ತು ಚಾಮುಂಡೇಶ್ವರಿ ಮತ್ತು ಕೆಂಪನಂಜಾಂಬ ಅಮ್ಮನವರ ದೇವಸ್ಥಾನದ ಗೋಡೆಗಳಲ್ಲಿವೆ. ಇಲ್ಲಿ ಗೋಡೆಗಳ ಮೇಲೆ ಗಿರಿಜಾಕಲ್ಯಾಣ, ಸಮುದ್ರ ಮಥನ ಮತ್ತು ಚಾಮುಂಡೇಶ್ವರಿಯ ಚಿತ್ರಗಳನ್ನು ಬಿಡಿಸಿದ್ದಾರೆ. ಚಿತ್ರಿಸಿದವರು ಅರಮನೆಯ ಕಲಾವಿದರು. ಇವರನ್ನು ಸೋಮವಂಶ ಕ್ಷತ್ರಿಯರು ಎನ್ನುತ್ತಾರೆ. ಇವರುಗಳಿಗೆ ಕಲೆಯೇ ವಂಶಪಾರಂಪರ್ಯವಾಗಿ ಜೀವನದ ವೃತ್ತಿಯಾಗಿತ್ತು. ಈ ಚಿತ್ರಗಳು ಮೈಸೂರಿನ ಸಂಪ್ರದಾಯ ಶೈಲಿಯಲ್ಲಿವೆ. ಈ ಶೈಲಿಯ ವೈಶಿಷ್ಟ್ಯವೆಂದರೆ ಚಿತ್ರಕ್ಕೆ ಕೊಡುವ ಸೊಬಗು ವೈಭವ ಅಲಂಕರಣ. ಈ ಚಿತ್ರಗಳಲ್ಲಿ ಬಾಹ್ಯರೇಖೆಗಳಿಗೇ ಪ್ರಾಧಾನ್ಯ ಚಿತ್ರಗಳಲ್ಲಿ ಕಪ್ಪು ಬೆಳಕನ್ನು ಸಂಯೋಜಿಸಿರುವುದರಿಂದ ೩ ಆಯಾಮದ ಭ್ರಮೆ ಇರುವುದಿಲ್ಲ. ಚಿತ್ರಗಳು ಚಪ್ಪಟೆಯಾಗಿರುತ್ತವೆ. ಈ ಚಿತ್ರಗಳ ಬಣ್ಣಗಳನ್ನು ಆಯಿಲ್ ಅಥವಾ ಎನಾಮೆಲ್‌ನಿಂದ ತಯಾರಿಸಿರುವುದಿಲ್ಲ. ಹಾಗೆ ತಯಾರಿಸಿದ್ದರೆ ಸುಮಾರು ೧೦೦ ವರ್ಷಕ್ಕೆ ಹಳೆಯವಾದ ಈ ಚಿತ್ರಗಳು ಬಹು ಹಿಂದೆಯೇ ಚೆಕ್ಕೆ ಚೆಕ್ಕೆಗಳಾಗಿ ಬಿದ್ದು ಉದುರಿ ಹೋಗುತ್ತಿದ್ದವು. ಈ ಚಿತ್ರದ ರಚನೆಗೆ ಬಣ್ಣಗಳನ್ನು ನೀಲಿ, ಕೆಂಪು, ಹಳದಿ ಬಣ್ಣದ ಕಲ್ಲುಗಳನ್ನು ತಂದು, ಅವುಗಳನ್ನು ಚೆನ್ನಾಗಿ ಅರೆದು ಪುಡಿ ಮಾಡಿ ಅದಕ್ಕೆ ವಜ್ರದ ಅಂಟು ಹಾಕಿ ತಯಾರಿಸುತ್ತಾರೆ. ವಜ್ರವನ್ನು ಚೆನ್ನಾಗಿ ಕಾಯಿಸಿದಾಗ ಅದು ಕರಗಿ ಲೋಳೆಯ ಅಂಟಾಗುತ್ತದೆ. ಇದಕ್ಕೆ ಪುಡಿ ಮಾಡಿದ ಬಣ್ಣ ಸೇರಿಸಿದಾಗ ಬಣ್ಣದ ಅಂಟು ಉತ್ಪಾದನೆಯಾಗಿ ಇದರಿಂದ ಚಿತ್ರ ತಯಾರಿಸುತ್ತಾರೆ. ಚಿನ್ನದ ಮೆರಗು ಕೊಡುವಾಗ ಚಿನ್ನವನ್ನು ಉಪಯೋಗಿಸುತ್ತಾರೆ. ನೀರಿನ ಅಂಶವೂ ಇಲ್ಲದ ಈ ಬಣ್ಣದಿಂದ ತಯಾರಿಸಿದ ಚಿತ್ರಗಳು ಗಾರೆಯ ಜೊತೆಗೆ ಅಚಿಟಿಹೋಗುತ್ತದೆ. ಹೀಗಾಗಿ ಬಹುಕಾಲ ಹಾಗೆಯೇ ಉಳಿಯುತ್ತವೆ. ನಮ್ಮ ದೌರ್ಭಾಗ್ಯವಶಾತ್ ಈ ಅತ್ಯುತ್ತಮ ಚಿತ್ರಗಳನ್ನು ನಾವು ಚೆನ್ನಾಗಿ ಸಂರಕ್ಷಿಸಿಲ್ಲ. ಕೆಲವು ಕಡೆ ದುರಸ್ತಿ ಮಾಡುವವರು ಅತ್ಯಂತ ಕೆಟ್ಟದಾಗಿ ಬಣ್ಣದ ತೇಪೆಗಳನ್ನು ಹಾಕಿದ್ದಾರೆ.

ನಗ ನಾಣ್ಯ ಒಡವೆ ಜವಾಹಿರಿಗಳ ದೃಷ್ಟಿಯಿಂದ ಚಾಮರಾಜೇಶ್ವರ, ಶ್ರೀಮಂತ ದೇವರು. ಮುಮ್ಮಡಿ ಕೃಷ್ಣರಾಜ ಒಡೆಯರು ತಮ್ಮ ಮೂವರು ಹೆಂಡತಿಯರೊಂದಿಗೆ ದೇವರ ದರ್ಶನಕ್ಕೆ ಬಂದಾಗ ತಮ್ಮ ಮತ್ತು ತಮ್ಮ ಹೆಂಡಂದಿರುಗಳ ಮೈ ಮೇಲಿದ್ದ ಎಲ್ಲ ಆಭರಣಗಳನ್ನು ದೇವರಿಗೆ ಸಮರ್ಪಿಸುತ್ತಿದ್ದರಂತೆ. ಇವುಗಳು ಈಗಲೂ ಚಾಮರಾಜನಗರದ ಟ್ರೆಜರಿಯಲ್ಲಿ ಸುರಕ್ಷಿತವಾಗಿದೆ. ಇವುಗಳಲ್ಲಿ ಕೆಲವನ್ನು ಗಿರಿಜಾ ಕಲ್ಯಾಣದ ಸಮಯದಲ್ಲಿ ಹೊರತೆಗೆದು ದೇವರಿಗೆ ಅಲಂಕರಿಸುತ್ತಾರೆ.

ಹಿಂದೆ ಮುಮ್ಮಡಿ ಕೃಷ್ಣರಾಜ ಒಡೆಯರು ದರ್ಶನಕ್ಕೆ ಬಂದಾಗ ಉತ್ಸವ ಮೂರ್ತಿಗೆ ಎಲ್ಲ ಆಭರಣಗಳನ್ನು ಧರಿಸಿ ಚಿತ್ರ ಮಂಟಪೋತ್ಸವ ಮಾಡುತ್ತಿದ್ದರು. ವಿಜೃಂಭಣೆಯಿಂದ ಕಾಣುತ್ತಿದ್ದ ದೇವರನ್ನು ನೋಡಲು ಎರಡು ಕಣ್ಣುಗಳು ಸಾಲದೆನ್ನುವಂತಿತ್ತು. ಆಗ ಒಡೆಯರು ತಮ್ಮ ಪಂಡಿತರಿಗೆ ದೇವರನ್ನು ವರ್ಣಿಸಿ ಎಂದರಂತೆ. ಆಗ ಪಂಡಿತರು ಹೀಗೊಂದು ಶ್ಲೋಕ ರಚಿಸಿದರು.

ಗೌತಮ ಎಂಬ ಋಷಿಗಳ ಹೆಂಡತಿ ಅಹಲ್ಯೆ. ಅಹಲ್ಯೆ ಸುಂದರಳಾದ ಹೆಂಗಸು. ಒಮ್ಮೆ ದೇವತೆಗಳ ರಾಜ ಇಂದ್ರ ಅಹಲ್ಯೆಯನ್ನು ನೋಡಿದ. ಅವಳ ಮೇಲೆ ಅವನಿಗೆ ಮನಸ್ಸುಂಟಾಯಿತು. ಅಹಲ್ಯೆಗೂ ಇಂದ್ರನ ಮೇಲೆ ಒಲವು ಮೂಡಿತು. ಯಾವಾಗಲೂ ತಪ್ಪಸ್ಸು ಮಾಡಿಕೊಂಡಿರುವ ಬಡಕಲು ಶರೀರದ ಗೌತಮರೊಡನೆ ಹೋಲಿಸಿದಾಗ ರಸಿಕರ ರಾಜನಾದ ಇಂದ್ರನಿಗೆ ಆಕೆ ಮನಸೋತಿದ್ದು ಆಶ್ಚರ್ಯವೇನಿಲ್ಲ. ಸರಿ ಇವರಿಬ್ಬರೂ ಕೂಡುವುದು ಯಾವಾಗ? ಇಂದ್ರ ಒಂದು ಯೋಜನೆ ತಯಾರಿಸಿದ. ಗೌತಮ ಅಹಲ್ಯೆಯರು ಮಲಗಿರುವ ಕೊಠಡಿಯ ಹೊರಗೆ ನಿಂತು ಮಧ್ಯ ರಾತ್ರಿಯ ವೇಳೆಯಲ್ಲಿ ಕೋಳಿಯಂತೆ ಕೂಗಿದೆ. ಬ್ರಾಹ್ಮಿ ಮುಹೂರ್ತ ಬಂತೆಂದು ಗೌತಮರು, ಎಚ್ಚೆತ್ತು ನದೀತೀರಕ್ಕೆ ಹೊರಟರು. ಇಂದ್ರ ಅಹಲ್ಯೆಯ ಜೊತೆ ರಮಿಸತೊಡಗಿದ. ಇತ್ತ ಎಷ್ಟು ಹೊತ್ತಾದರೂ ಉಷೆ ಮೂಡದ್ದನ್ನು ಕಂಡು ಗೌತಮರು ಮರಳಿ ಆಶ್ರಮಕ್ಕೆ ಬಂದರು. ಇವರು ಬಂದದ್ದನ್ನು ತಿಳಿದು ಇಂದ್ರ ಇವರ ಮುಂದೆಯೇ ಓಡಿ ಹೋದ. ಗೌತಮರು ಸಿಟ್ಟಾಗಿ ಇಂದ್ರನಿಗೆ ನಿನ್ನ ಮೈಯೆಲ್ಲ ಕಣ್ಣಾಗಲಿ, ನಿನಗೆ ಸಾವಿರ ಕಣ್ಣುಗಳು ಬರಲಿ ಎಂದು ಶಪಿಸಿದರಂತೆ. ಅಹಲ್ಯೆಗೆ ಕಲ್ಲಾಗಿ ಹೋಗು ಂದು ಶಾಪಕೊಟ್ಟರು. ಮುಂದೆ ಶ್ರೀರಾಮ ತನ್ನ ಕಾಲುಗಳಿಂದ ಕಲ್ಲನ್ನು ಸೋಕಿದಾಗ ಅಹಲ್ಯೆಗೆ ಪುನಃ ಮಾನವ ಶರೀರ ಬಂತು. ದೇಹದಲ್ಲಿ ಸಾವಿರ ಕಣ್ಣುಗಳ್ಳವನು ಎಂಬರ್ಥದಲ್ಲಿ ಇಂದ್ರನಿಗೆ ಸಹಸ್ರಾಕ್ಷ ಎಂಬ ಹೆಸರು ಬಂದಿತು. ಅಂಥ ಇಂದ್ರ ಚಿತ್ರ ಮಂಟಪದಲ್ಲಿದ್ದ ಚಾಮರಾಜೇಶ್ವರನನ್ನು ನೋಡಿ, ಈ ದೇವರನ್ನು ನೋಡಲು ನನಗೆ ಸಾವಿರ ಕಣ್ಣುಗಳು ಸಾಲದು ಇನ್ನೊಂದು ಸಾವಿರ ಕಣ್ಣಾದರೂ ಬೇಕಿತ್ತು. ಅದಕ್ಕಾಗಿ ಮತ್ತೊಮ್ಮೆ ಅಹಲ್ಯೆಯನ್ನು ರಮಿಸಬಾರದೇಕೆ ಎಂದು ಯೋಚಿಸತೊಡಗಿದನಂತೆ.

ಈಗ ಸಾಮಾನ್ಯ ದಿನಗಳಲ್ಲಿ ದೇವಸ್ಥಾನದ ಒಳಗೆ ಹೋದಾಗ ಶಾಂತ ವಾತಾವರಣವಿರುತ್ತದೆ. ಅಲ್ಲೊಬ್ಬ ಇಲ್ಲೊಬ್ಬ ದೇವಸ್ಥಾನದ ಸಿಬ್ಬಂದಿಯವರು ಭಕ್ತರು ಕಾಣಸಿಗುತ್ತಾರೆ. ಇಡೀ ದೇವಸ್ಥಾನವೇ ಬಣ ಬಣಗುಟ್ಟುತ್ತಿದೆಯೋ ಎಂದು ಅನ್ನಿಸುತ್ತದೆ. ಆದರೆ ಸುಮಾರು ೪೦ ವರ್ಷಗಳ ಹಿಂದೆ ಹೀಗಿರಲಿಲ್ಲ. ಯಾವಾಗಲೂ ಜನರಿಂದ

ತುಂಬಿರುತ್ತಿತ್ತು. ನನ್ನ ಬಾಲ್ಯದ ದಿನಗಳಲ್ಲೂ ದೇವಸ್ಥಾನ ಈ ಊರಿನ ಕೇಂದ್ರವೆನಿಸಿತ್ತು. ಆಗ ಅರ್ಚಕರು ಮಂತ್ರ ಪುಷ್ಪದವರು. ಶ್ರೀಪಾದದವರು, ವಾದ್ಯದವರು ಪರಿಚಾರಕರು ಬ್ರಾಹ್ಮಣರು ಮತ್ತು ಇತರ ಜಾತಿಯವರು (ಮುಸ್ಲಿಮರೂ ಸೇರಿ) ೧೦೮ ಜನ ಸಿಬ್ಬಂದಿಯಿದ್ದರು. ದೇವಸ್ಥಾನದಲ್ಲೇ ಸಂಸ್ಕೃತ ವೇದ ಉಪನಿಷತ್ತು ಮುಂತಾದವುಗಳನ್ನು ಕಲಿಯುವ ಪಾಠಶಾಲೆಯಿತ್ತು. ಅದರಲ್ಲಿ ಸುಮಾರು ೨೦ ವಿದ್ಯಾರ್ಥಿಗಳಿದ್ದರು. ಪ್ರಾಚಾರ್ಯರ ಗುಂಪೆ ಇತ್ತು. ಈ ಪಾಠಶಾಲೆಗೆ ಅಧ್ಯಕ್ಷರಾಗಿದ್ದವರಲ್ಲಿ, ಹಿಂದಿ ಶಾಲೆ ನಡೆಸುತ್ತಿರುವ ಚಕ್ರವರ್ತಿ ರಾಜಗೋಪಾಲಚಾರ್ಯರೂ ಒಬ್ಬರು. ಪಾಠಶಾಲೆ ವಿದ್ಯಾರ್ಥಿಗಳಿಗೆ, ದೇವರ ನೈವೇದ್ಯಕ್ಕೆ ಮತ್ತು ಚಾಮರಾಜನಗರಕ್ಕೆ ಬರುವ ಯಾತ್ರಿಕರಿಗೆ (ಸತ್ಯಮಂಗಲಕ್ಕೆ ಹೋಗಿ ಬರುವವರೆಲ್ಲ ಇಲ್ಲಿ ತಂಗಲೇ ಬೇಕಿತ್ತು) ಊಟದ ವ್ಯವಸ್ಥೆಯನ್ನು 'ಶಿವಕೂಟ' ಎಂಬ ಹೆಸರಿನಲ್ಲಿ ನಡೆಸುತ್ತಿದ್ರು. ಹೀಗೆ ಶಿವಕೂಟದಲ್ಲಿ ಅಡಿಗೆ ಕೆಲಸದಲ್ಲಿದ್ದವರಲ್ಲಿ ಪಚ್ಚಪ್ಪನವರೂ ಒಬ್ಬರು. ಪಚ್ಚಪ್ಪನವರು ಮಾಡುತ್ತಿದ್ದ ಅಡುಗೆಯ ರುಚಿ ನಾನು ಚಿಕ್ಕವಳಾಗಿದ್ದ ಕಾಲದಲ್ಲಿ ಬಹಳ ಹೆಸರು ಪಡೆದಿತ್ತು. ಮದುವೆ ಮುಂತಾದ ಸಮಾರಂಭದಲ್ಲಿ ಊಟ ಹೊಡೆದು ಬರುತ್ತಿದ್ದವರು 'ಸಾರು ಅಂದರೆ ಪಚ್ಚನ ಸಾರು' ಎಂದು ಹೇಳುತ್ತಿದ್ದುದು ನನಗೆ ಇನ್ನೂ ಜ್ಞಾಪಕವಿದೆ. ಒಮ್ಮೆ ದೇವಸ್ಥಾನವನ್ನೇ ಅಲುಗಾಡಿಸುವಂಥ ಘಟನೆಯೊಂದು ನಡೆಯಿತು., ಆಗ ಕೆಂಗಲ್ ಹನುಮಂತಯ್ಯನವರು ಮೈಸೂರು ರಾಜ್ಯದ ಮುಖ್ಯಮಂತ್ರಿಗಳಾಗಿದ್ದರು. ಒಮ್ಮೆ ರಾಜ್ಯ ಪ್ರವಾಸದ ಸಮಯದಲ್ಲಿ ಚಾಮರಾಜನಗರಕ್ಕೆ ಬಂದು ದೇವಸ್ಥಾನಕ್ಕೂ ಬಂದರು. ಅವರನ್ನು ಬಹಳ ಮರ್ಯಾದೆಯಿಂದ ಸ್ವಾಗತಿಸಲಾಯಿತು. ದೇವರ ಸಾನಿಧ್ಯಕ್ಕೆ ಬಂದಾಗ ದೀಪಾರಾಧನೆಯಾಗಲಿ ಎಂದು ಪಾರುಪತ್ಯೇದಾರರು ಆಜ್ಞೆ ಇತ್ತರು. ದೇವರಿಗೆ ಚಿಕ್ಕದಾಗಿ ಪೂಜೆ ಮಾಡಿ ಅನಂತರ ಮಂಗಳಾರತಿ ಎತ್ತಿದರು. ಜನರಿಗೆ ಮಂಗಳಾರತಿ ತೋರಿಸಲು ತಟ್ಟೆ ಹಿಡಿದು ಒಬ್ಬ ಅರ್ಚಕ ಸಿದ್ದನೂ ಆದ. ಮುಖ್ಯಮಂತ್ರಿಯವರು ತಾವು ಯಾವಾಗಲೂ ಧರಿಸುತ್ತಿದ್ದ ಮೈಸೂರು ಪೇಟವನ್ನು ತಲೆಯಿಂದ ತೆಗೆದು ಕೈಲಿ ಹಿಡಿದು ಮಂಗಳಾರತಿ ಸ್ವೀಕರಿಸಲು ಸಿದ್ದರಾದರು. ಮಂಗಳಾರತಿ ಮೊದಲು ತಮಗೇ ಬರುತ್ತದೆ ಎಂದು ಅವರು ಭಾವಿಸಿರಬೇಕು. ಆದರೆ ಹಾಗೆ ಆಗಲಿಲ್ಲ. ಮಂಗಳಾರತಿ ತಟ್ಟೆಯನ್ನು ದೇವರ ಪಕ್ಕದಲ್ಲಿ ಜೋರಾಗಿ ಮಂತ್ರ ಹೇಳುತ್ತಿದ್ದ ಬ್ರಾಹ್ಮಣರ ಗುಂಪಿನತ್ತ ತೆಗೆದುಕೊಂಡು ಹೋದ. ಅಲ್ಲಿ ಸುಮಾರು ೪೫ ಮಂದಿ ಇದ್ದರು. ಒಬ್ಬೊಬ್ಬರಾಗಿ ಮಂಗಳಾರತಿಯನ್ನು ಅವರ ಅಂತಸ್ತಿನ ಕ್ರಮದಲ್ಲಿ ತೋರಿಸುತ್ತ ಅರ್ಚಕ ಮುನ್ನಡೆದ. ಇದರಲ್ಲಿ ಪೂಜಾರಿಯ ತಪ್ಪೇನೂ ಇರಲಿಲ್ಲ. ಈ

ಕ್ರಮದಲ್ಲೆ ಮಾಡಬೇಕೆಂದು ದೇವಸ್ಥಾನದ ಮಾನ್ಯುಯಲ್‌ನಲ್ಲೇ ಬರೆದಿದೆ. ಇತ್ತ ಮುಖ್ಯಮಂತ್ರಿ ಯವರು ತಮಗೆ ಅವಮಾನವಾಯಿತೆಂದು ಭಾವಿಸಿದರು. ಯಾವ ಮಾತನ್ನು ಆಡದೆ ಮಂಗಳಾರತಿ ತೀರ್ಥವನ್ನು ಸ್ವೀಕರಿಸದೆ ಸರಸರನೆ ದೇವಸ್ಥಾನದಿಂದ ಹೊರಬಂದು ಪೆಟ್ರೋಲ್ ಬಂಕ್ ನಾರಾಯಣ್‌ರವರ (ನಾಣಿ) ಮನೆಗೆ ಹೊರಟು ಬಿಟ್ಟರು. ಆನ ಆಶ್ಚರ್ಯಪಟ್ಟರು. ಎಲ್ಲ ಕಡೆಯೂ ಇದೇ ಮಾತಾಯಿತು. ಪರ ವಿರೋಧ ಚರ್ಚೆ ಬಹಳ ಕಾಲ ನಡೆಯಿತು. ಮುಖ್ಯಮಂತ್ರಿಗಳಿಗೆ ಅವಮಾನ ಮಾಡಿದ್ದಕ್ಕಾಗಿ ಒಬ್ಬ ಅರ್ಚಕರನ್ನು ಸಸ್ಪೆಂಡ್ ಮಾಡಲಾಉಯಿತು. ಇನ್ನೊಬ್ಬರಿಗೆ ೧೫ ರೂ. ದಂಡ ಹಾಕಲಾಯಿತು. ಆದರೆ ಇವರುಗಳು ಮನವಿ ಮಾಡಿಮಾಡಿಕೊಂಡಿದ್ದರಿಂದ ಅದನ್ನು ಕೆಲಕಾಲದ ಅನಂತರ ಮಾಫಿ ಮಾಡಲಾಯಿತು.

ದೇವಸ್ಥಾನದ ಖರ್ಚುಗಳಿಗಾಗಿ ಮುಮ್ಮಡಿ ಕೃಷ್ಣರಾಜ ಒಡೆಯರು ೧೩ ಗ್ರಾಮಗಳನ್ನು ಬಿಟ್ಟಿದ್ದರು. ಇವುಗಳೆಂದರೆ ಉಮ್ಮತ್ತೂರು, ನವಿಲೂರು, ಮೂಡ್ಲಅಗ್ರಹಾರ, ಬೇಡರಪುರ, ಕಟ್ಟೆಪುರಂ, ಶಿವಪುರ, ಯಲಕ್ಕೂರು, ಹರದನಹಳ್ಳಿ, ಸಪ್ಪೆನಪುರ, ಹಂದ್ರಕನ ಹಳ್ಳಿ, ಬೆಂಡರವಾಡಿ, ಮುತ್ತಿಗೆ ಮತ್ತು ಹೆಗ್ಗುಠಾರ ಇವರ ಆದಾಯ ಚೆನ್ನಾಗಿರುವವರೆಗೂ ದೇವಸ್ಥಾನದಲ್ಲಿ ವಿಜೃಂಭಣೆಯಿಂದ ದಿನಗಟ್ಲೆ, ಹೆಚ್ಚುಗಟ್ಲೆ ಪೂಜೆಗಳು ನಡೆಯುತ್ತಿದ್ದವು. ಹೆಚ್ಚು ಗಟ್ಲೆಯ ದಿನಗಳಲೆಲ್ಲ ಉತ್ಸವ ಮೂರ್ತಿಯ ಮೆರವಣಿಗೆ ರಥದ ಬೀದಿಯಲ್ಲಿ ಬರುತ್ತಿತ್ತು. ರಥೋತ್ಸವ ಗಿರಿಜಾ ಕಲ್ಯಾಣ ಅಂಧಕಾಸುರ ವಧೆ ಮುಂತಾದವುಗಳನ್ನು ನೋಡಲು ದೂರದ ಊರಿನಿಂದಲೂ ಜನರು ಬರುತ್ತಿದ್ದರು. ಆಗ ಸಿಬ್ಬಂದಿ ವರ್ಗದವರಿಗೆ ತಕ್ಕ ಮಟ್ಟಿಗೆ ಸಂಬಳವೂ ದೊರಕುತ್ತಿತ್ತು. ಸಮಾಜದಲ್ಲಿ ಅವರಿಗೆ ಸಾಕಷ್ಟು ಅಂತಸ್ತೂ ಗೌರವವೂ ಇತ್ತು.

ದೇವಸ್ಥಾನಕ್ಕೆ ಆರ್ಥಿಕವಾಗಿ ಏಟು ಬಿದ್ದದ್ದು ಭೂ ಹಿಡುವಳಿ ಕಾಯಿದಯಿಂದ. ಗ್ರಾಮಗಳಿಂದ ಬರುತ್ತಿದ್ದ ಆದಾಯ ನಿಂತು ಹೋಯಿತು. ಬದಲಿ ವ್ಯವಸ್ಥೆಯನ್ನು ಸೂಕ್ಷವಾಗಿ ಮಾಡಲಿಲ್ಲ. ಇದರಿಂದ ಸಿಬ್ಬಂದಿಯ ಸಂಬಳವನ್ನು ಇದ್ದಕ್ಕಿದ್ದಂತೆ ಕಡಿಮೆಮಾಡಲಾಯಿತು. ನೈವೇದ್ಯ ಮಾಡಿದ ಅನ್ನದ ಹಂಚಿಕೆಯನ್ನು ನಿಲ್ಲಿಸಲಾಯಿತು. ಇದರಿಂದ ಸಿಬ್ಬಂದಿ ವರ್ಗದವರೆಲ್ಲ ಬಹಳ ದಾರುಣ ಸ್ಥಿತಿಗೆ ಸಿಲುಕಿದರು. ಕೆಲವರು ಕೆಲಸ ಬಿಟ್ಟು ಬೇರೆ ಕೆಲಸ ಹಿಡಿದರು. ಮತ್ತೆ ಕೆಲವರು ಮೈಸೂರು ಬೆಂಗಳೂರಿಗೆ ಹೋದರು. ಕೆಲವರು ಮಾತ್ರ ತೀರ ಬಡತನದ ಸ್ಥಿತಿಯಲ್ಲೂ ದೇವತ ಸೇವೆ ಬಿಡಲಿಲ್ಲ. 'ಚಾಮರಾಜೇಶ್ವರ ನಮಗೆ ಮುಂಚೆ ಹೊಟ್ಟೆ ತುಂಬಾ ಅನ್ನ ಕೊಡುತ್ತಿದ್ದ, ಚೆನ್ನಾಗಿದ್ದೆವು. ಈಗ ಅವನಿಗೇ ಅನ್ನವಿಲ್ಲದಿದ್ದಾಗ ನಮಗೇನು ಕೊಟ್ಟಾನು? ಅವನು ನಮ್ಮ ಕೈ ಬಿಟ್ಟರೂ

ನಾವು ಅವನ ಕಐ ಬಿಡುವುದಿಲ್ಲ' ಎಂದು ಹೇಳುತ್ತಿದ್ದರು. ಹಾಗೆಯೇ ಜೀವನವನ್ನು ಸವೆಸಿದರು.

ಈಗ ದೇವಸ್ಥಾನದ ಆರ್ಥಿಕ ಸ್ಥಿತಿ ಸುಧಾರಿಸಿದೆ. ದೇವಸ್ಥಾನದಲ್ಲಿ ೨೫ ಜನ ಸಿಬ್ಬಂದಿಯಿದ್ದಾರೆ. ಇವರ ಸಂಬಳಕ್ಕಾಗಿ ೧ ಲಕ್ಷ ೫೦ ಸಾವಿರ ರೂ. ನಿತ್ಯಕಟ್ಲೆ ಹೆಚ್ಚುಕಟ್ಲೆ ಸೇವೆಗಳಿಗಾಗಿ ೫೦ ಸಾವಿರ ರೂ. ಖರ್ಚಾಗುತ್ತದೆ.

೧೮೯ಳನೇ ಇಸವಿಯಿಂದ ದೇವಸ್ಥಾನದ ಆಯಾ ಸನ್ನಿಧಿಯಲ್ಲಿ ಪಹರೆ ಇದ್ದು, ನಗನಾಣ್ಯ ಪಾತ್ರೆ ಮೊದಲಾದ ಚರಸ್ವತ್ತುಗಳ ಉಸ್ತುವಾರಿ ನೋಡಿಕೊಳ್ಳಲು ಇಬ್ಬರು ಹವಾಲ್ದಾರರು ೧ಳ ಜನ ಸಿಪಾಯಿಗಳನ್ನು ಒಂದು ಮಿಲಿಟರಿ ಶಾಲೆ ಏರ್ಪಾಟು ಮಾಡಿದ್ದರೆಂದು ಮುಜರಾಯಿ ಮ್ಯಾನ್ಯೂಯಲ್ ಪುಟ ೩ರಲ್ಲಿ ತಿಳಿದುಬರುತ್ತದೆ.

ಅರ್ಚಕ, ಆಗಮಿಕ– ಅಮಲ್ದಾರ್, ಸುಬೇದಾರ, ಅಂಚೆ ಮುತ್ಸದ್ದಿ ಮುಂತಾದ ಸೇವಾ ನೌಕರರುಗಳನ್ನು ನೇಮಿಸಿದ್ದಲ್ಲದೇ ಈ ದೇವಾಲಯಕ್ಕೆ ನವಬೀರಗಳಿಂದ ಕೂಡಿದ ಉತ್ಸಮೂರ್ತಿಗಳನ್ನು ಸ್ವರ್ಣ ರಜತಮಯ ಬಗೆಬಗೆಯ ಆಭರಣಗಳು– ಚಿತ್ರಮಂಟಪ, ಬೆಳ್ಳಿ ಮಂಟಪ– ಬುಗುರಿ ಮಂಟಪ, ರುದ್ರಾಕ್ಷಿ ಮಂಟಪ ಹಲವು ಬಗೆಯ ರಥ, ಚಿತ್ರರಥ, ಬೊಂಬೆಯ ರಥ, ಬೆಳ್ಳಿ ರಥ, ಕುಂಭಾರತಿ, ಕನಕ ಕ್ರಾಂತಿ, ಪಾಂಚಜನ್ಯದ ಶಂಖ–ಗೋಶ್ಚಂಕ, ನೀಡಿದ್ದರೂ ಒಮ್ಮೆ ಸಂಸಾರ ಸಮೇತ ದೇವಾಲಯಕ್ಕೆ ಭೇಟಿ ನೀಡಿದ ಸಂದರ್ಭದಲ್ಲಿ ನಿರಾಡಾಂಬರ ಮೂರ್ತಿಯನ್ನು ದರ್ಶನ ಮಾಡಿದ ಮಹಾರಾಜರು ತಾವು ಧರಿಸಿದ್ದ ಆಭರಣಗಳನ್ನು ದೇವರಿಗೆ ಸಮರ್ಪಣೆ ಮಾಡಿ 'ಕಣ್ತುಂಬ ಆನಂದಿಸಿದ್ದರು. ಇವರ ಮಾರ್ಗವನ್ನೇ ಅನುಸರಿಸಿದ ಇವರ ಪತ್ನಿಯರಾದ ಅಂಬಾವಿಲಾಸ ರಮಾವಿಲಾಸ ಕೃಷ್ಣಾವಿಲಾ ಮುಂತಾದ ಪಟ್ಟದರಸಿಯರು ತಮ್ಮ ಮೈಮಲಿನ ಆಭರಣಗಳನ್ನು ಅಮ್ಮನವರಿಗೆ ಸಮರ್ಪಿಸಿ ಅಲಂಕರಿಸಿದರು. ೧೩ ಗ್ರಾಮಗಳ ಉತ್ಪತ್ತಿಯನ್ನು ಈ ದೇವಾಲಯಕ್ಕೆ ವಿನಿಯೋಗಿಸುವಂತೆಯೂ ದೇವಾಲಯದ ನೌಕರರುಗಳಿಗೆ ೪೬ ಮನೆಗಳನ್ನು ಅಗ್ರಹಾರದಲ್ಲಿ ನಿರ್ಮಿಸಿ, ಆಗ್ಗೆ ಸಾಲಿಯಾನ ೧೮೨೬ರಲ್ಲಿ ೧೭,೦೦೦–೦೦ ಉತ್ಪತ್ತಿ ನೀಡಿದ್ದರು ಎಂದು ದೇವಾಲಯದ ಕೈಪಿಡಿಯಲ್ಲಿ ತಿಳಿಸಿರುತ್ತದೆ.

ಪ್ರಾತಃ– ಮಧ್ಯಾಹಿಕ, ಪ್ರದೋಷ ಎಂಬ ತ್ರಿಕಾಲ ಪೂಜೆಯ ದೇವಾಲಯ ನಿರ್ಮಾಣ ಕಾಲದಿಂದಲೂ ಶೈವಾಗಮ ರೀತ್ಯಾ ನಡೆದುಕೊಂಡು ಬಂದಿದೆ. ಜೇಷ್ಠ

ಮಾಸದಲ್ಲಿ ಉಮಾವತಾರದಂದು ಗಿರಿಜಾ ಕಲ್ಯಾಣವು, ಅಷಾಢಮಾಸದ ಪೂರ್ವಾಷಾಡ ನಕ್ಷತ್ರದಲ್ಲಿ ಬ್ರಹ್ಮ ರಥೋತ್ಸವವೂ ನಡೆಯುತ್ತವೆ.

ದೇವರ ಉತ್ಸವಕ್ಕಾಗಿ ಅರೇಪುರದ ಬಸವರಾಜೇ ಅರಸ್ ಎಂಬುವವರು ಒಂದು ದೊಡ್ಡ ರಥವನ್ನು ಮುದ್ದುಕೃಷ್ಣಾಜಮ್ಮಣ್ಣಿ ಯವರು ಒಂದು ಚಿತ್ರರಥವನ್ನು ಬೊಂಬೆರಥವನ್ನು ಸರ್ಕಾರ ಹಾಗೂ ಭಕ್ತಾದಿಗಳ ವತಿಯಿಂದ ಇತ್ತೀಚೆಗೆ ಅಮ್ಮನವರ ರಥವನ್ನು ಸಮರ್ಪಿಸಲಾಗಿದೆ.

ಈ ದೇವಾಲಯದಲ್ಲಿ ಸೋಮವಾರ ಕಟ್ಲೆ, ಶುಕ್ರವಾರ ಕಟ್ಲೆ, ಮಂಗಳವಾರ ಕಟ್ಲೆ, ಚಿತ್ತಾ ನಕ್ಷತ್ರ, ಶ್ರವಣ ನಕ್ಷತ್ರ, ಉತ್ತರಾಭಾದ್ರ, ಪೂರ್ವಾಷಾಡ ನಕ್ಷತ್ರ, ಮಾರ್ಕಂಡೇಯೋತ್ಸವ, ದಕ್ಷಿಣಾಯನ, ಉತ್ತರಾಯಣಪುಣ್ಯಕಾಲ, ತಿರುನಾಳ, ನವರಾತ್ರಿ, ಕೃತ್ತಿಕೋತ್ಸವ, ದೀಪಾವಳಿ, ಆರಿದ್ರೋತ್ಸವ, ಶಿವರಾತ್ರಿ, ಯುಗಾದಿ, ವೈಮಾಳಿಕೋತ್ಸವ, ಗಿರಿಜಾ ಕಲ್ಯಾಣ ವಸಂತೋತ್ಸವ, ಧನುರ್ಮಾಸ, ಮಹಾರಾಜರ ವರ್ಧಂತಿಗಳು ಜರುಗುತ್ತವೆ.

ಸಾಮಾನ್ಯವಾಗಿ ಆಷಾಢ ಮಾಸವು ಮೂಲ ಮಾಸವೆಂದು, ಶುಭ ಕಾರ್ಯಗಳು ನಿಷೇಧಿಸಲ್ಪಡುತ್ತವೆಂದು ಇದೆ. ಆದರೆ, ಇದಕ್ಕೆ ಅಪವಾದವೆಂಬಂತೆ ಈ ಮಾಸದಲ್ಲೇ ಇಲ್ಲಿ ರಥೋತ್ಸವವು ನಡೆಯುತ್ತದೆ. ಆಷಾಢ ಮಾಸದ ಪೂರ್ವಾಷಾಢ ನಕ್ಷತ್ರದಲ್ಲಿ ಹುಣಿಮೆಯಂದು ನಡೆಯುತ್ತದೆ. ಈ ರಥಕ್ಕೆ ಹೊಸದಾಗಿ ಮದುವೆಯಾದ ದಂಪತಿಗಳು ಹಣ್ಣು ಜವನವನ್ನು ಕಳಸಕ್ಕೆ ಎಸೆದರೆ ಪುರ ಸಂತಾನವಾಗುವುದೆಂದು, ಸುಖ ಸಂತೋಷ ನೆಮ್ಮದಿ ಸಹಬಾಳ್ವೆ, ಮುಕ್ತಿ ದೊರೆಯುವುದೆಂದು ನಂಬಿಕೆ ಇದೆ. ಇವಿಷ್ಟು ದೇವಸ್ಥಾನದ ನಿರ್ಮಾಣ ಹಾಗೂ ಅದರ ಅಸ್ತಿತ್ವದ ವಿಚಾರವಾಯ್ತು. ಇನ್ನು ದೇವಾಲಯ ದರ್ಶನ ಹಾಗೂ ಪ್ರದಕ್ಷಿಣೆ ವಿಚಾರ.

ಮೊದಲಿಗೆ ಮುಂಬಾಗಿಲ ಹೊಸಲಿಗೆ ಕೈಯಿಂದ ಮುಟ್ಟಿ ನಮಸ್ಕರಿಸಿಕೊಂಡು ಬರಬೇಕು. ಅಲ್ಲಿ ದೇವಸ್ಥಾನಕ್ಕೆ ಅಂದರೆ ದೊಡ್ಡ ಬಸವ ಇರುವ ಎಡಭಾಗಕ್ಕೆ ಮಂಡಿಯೂರು ಅಥವಾ ಸಾಷ್ಟಾಂಗ ನಮಸ್ಕಾರ ಮಾಡಬೇಕು. ಅನಂತರ ನಂದಿ ಕಂಬದಲ್ಲಿರುವ ಬಸವ ಹಾಗೂ ಗಣಪತಿಯನ್ನು ಕೈಯಲ್ಲಿ ಮುಟ್ಟಿ ಹಣೆಗೆ ನಮಸ್ಕರಿಸಿಕೊಳ್ಳಬೇಕು. ಅಲ್ಲಿಂದ ಮೆಟ್ಟಿಲು ಹತ್ತಿ ಹೋದರೆ ಎಡಭಾಗದಲ್ಲಿ ಗಣಪತಿಯ ಗುಡಿಗೆ ಹೋಗಿ ನಂದಿ ಹಾಗೂ ಗಣಪತಿಗೆ ಕೈ ಮುಗಿದು ನಮಸ್ಕರಿಸಬೇಕು. ಅಲ್ಲಿಂದ ಒಳಗೆ ಚಾಮರಾಜಸ್ವಾಮಿಗೆ ಕೈ ಮುಗಿದು ಮಂಗಳಾರತಿ ತೆಗೆದುಕೊಂಡು ಸ್ವಲ್ಪ ಪ್ರಸಾದ ತೆಗೆದುಕೊಂಡು ಅಮ್ಮನವರಿಗೆ ಅಡ್ಡಬಿದ್ದು ಎಡಗಡೆಯಿಂದ ನೇರ ಬಂದು ಸಹಸ್ರಲಿಂಗ

ದರ್ಶನ ಮಾಡಬೇಕು. ಅಲ್ಲಿಂದ ಮುಂದೆ ಸಾಲು ಗುಡಿಗಳಿಗೆ ಕೈಯಿಂದ ಸಮಸ್ಕರಿಸಿ ದಕ್ಷಿಣಾಮೂರ್ತಿಗೆ ತಲೆ ಮುಟ್ಟಿ ನಮಸ್ಕರಿಸಿ ಮುಂದುವರಿದು ಕೆಂಪನಂಜಾಂಬರವರ ದರ್ಶನಕ್ಕೆ ಬರಬೇಕು. ಅಲ್ಲಿ ಅರ್ಚಕರಿಂದ ತೀರ್ಥ ಪ್ರಸಾದ ಪಡೆದು, ನವಗ್ರಹಕ್ಕೆ ಮೂರು ಸುತ್ತು ಪ್ರದಕ್ಷಿಣ ಹಾಕಬೇಕು. ಅಲ್ಲಿಂದ ನಾರಾಯಣಸ್ವಾಮಿ ದರ್ಶನ ಮಾಡಿಕೊಂಡು ಚಂಡಿಕೇಶನ ದರ್ಶನ ಮಾಡಬೇಕು. ಇದಕ್ಕೆ ಪ್ರದಕ್ಷಿಣೆ ಹಾಗೂ ನಮಸ್ಕಾರಗಳ ಅಗತ್ಯವಿಲ್ಲ. ಚಾಮರಾಜೇಶ್ವರನ ಪ್ರಸಾದ ಬಿಲ್ವಪತ್ರೆಯನ್ನು ಅರ್ಚಿಸಿ 'ಚಾಮರಾಜೇಶ್ವರನ' ದರ್ಶನ ಆಯಿತು. ಅಮ್ಮನವರ ದರ್ಶನ ಆಯ್ತು ಚಾಮುಂಡೇಶ್ವರಿ ದರ್ಶನ ಆಯ್ತು ಯಮದೂತರು ಬಂದಾಗ ಶಿವದೂತರು ಬಂದಾಗ ಶಿವದೂತರು ಬಂದಿದ್ದರು ಅಂತ ಹೇಳಿ ಬಿಡಪ್ಪ ಚಂಡಕೇಶ ಎಂದು ಚಪ್ಪಾಳೆಯನ್ನು ಹೊಡೆದು, ಚಿಟಿಕೆ ಹೊಡೆದು, ಬಾಗಿಲು ನಾಲ್ಕು ಕಡೆಗೆ ಬಡಿದು ಅದನ್ನು ಎಚ್ಚರಿಸಬೇಕಂತೆ. ಯಾಕೆಂದರೆ ಈ ದೇವರಿಗೆ ಕಿವುಡು ಎಂದು ಪ್ರತೀತಿ. ವರದಿ ಒಪ್ಪಿಸುವುದರಲ್ಲಿ ಇವನನ್ನು ಬಿಟ್ಟರೆ ಬೇರಾರು ಪರಿಣಿತರಲ್ಲವಂತೆ.

ಅಂದ ಹಾಗೆ ಮಕ್ಕಳು ಚಂಡಿ ಹಿಡಿದರೆ ಈ ದೇವರಿಗೆ ಪುರಿ ಸೇವೆ ನಡೆಸುವುದು ವಾಡಿಕೆ. ಇಲ್ಲಿಂದ ಹೊರಟು ಕ್ಷೇತ್ರಪಾಲರನ್ನು ನಮಸ್ಕರಿಸಿ ಪಾರಿಜಾತಕ್ಕೆ, ಬಿಲ್ವ ವೃಕ್ಷಕ್ಕೆ ನಮಸ್ಕರಿಸಬೇಕು. ಅಲ್ಲಿ ಬಲಗಡೆಯಲ್ಲಿ ಅನ್ನಪೂರ್ಣೇಶ್ವರಿ ದರ್ಶನ ಮಾಡಿಕೊಂಡು ದೊಡ್ಡ ಬಸವನ ಬಲಭಾಗದಲ್ಲಿ ನಿಂತು ಸ್ವಲ್ಪ ಬಗ್ಗಿ ನೋಡಿ ಮತ್ತೊಮ್ಮೆ ಚಾಮರಾಜೇಶ್ವರನ ದರ್ಶನ ಮಾಡಿ ಸ್ವಲ್ಪ ಹೊತ್ತು ವಿರಮಿಸಿ ದೇವರ ಧ್ಯಾನ ಮಾಡಿ ಹೊರಡಬೇಕು. ಹೊರಗಡೆ ಬಂದರೆ ಧೂಪದವರ ಹುಯ್ಲು, ಅವರಿಗೆ ಒಂದು ರೂಪಾಯಿ ಕೊಟ್ಟು ಧೂಪ ಹಾಕಿ ಗೋಪುರವನ್ನು ಕತ್ತೆತ್ತಿ ನೋಡಿ ನಮಸ್ಕರಿಸಿಕೊಂಡು ನಾನು ಕೂಡ ಎತ್ತರಕ್ಕೆ ಬೆಳೆಯುವ ಹಾಗೆ ಆಗಬೇಕೆಂದು ಆಶಯಗಳನ್ನು ಹೊತ್ತು ಬರಬೆಕು. ಹಿರಿಯರಿಂದ ಕೇಳಿ ಕಲಿತ ವಿಚಾರ ಇದು.

ಇಲ್ಲಿಗೆ ಎಲ್ಲರೂ ಸಂಸ್ಕೃತಿ, ಜಾತಿ, ಮತ ಬೇಧವಿಲ್ಲದೆ ಬಂದು ದರ್ಶನ ಮಾಡುತ್ತಾರೆ. ದೇವರ ರಥೋತ್ಸವದಲ್ಲಿ ಪಾಲ್ಗೊಳ್ಳುತ್ತಾರೆ. ಚಾಮರಾಜೇಶ್ವರ ದೇವಸ್ಥಾನ ಒಂದು ಐತಿಹಾಸಿಕ ಆಸ್ತಿ ಎನ್ನುವುದರಲ್ಲಿ ಸಂಶಯವೇ ಇಲ್ಲ.

ಚಾಮರಾಜೇಶ್ವರ ದೇವಸ್ಥಾನದ ಕಡೆ ನೋಡಿದಾಗಲೆಲ್ಲ ಅದೇಕೆ ಈ ದೇವಸ್ಥಾನಕ್ಕೆ ಭಕ್ತರುಗಳ ಸಂಖ್ಯೆ ಕಡಿಮೆ? ಅದೇ ಹತ್ತಿರದಲ್ಲಿರುವ ನಂಜನಗೂಡಿನ ಶ್ರೀಕಂಠೇಶ್ವರ ದೇವಸ್ಥಾನಕ್ಕೆ ಭಕ್ತರು ಹೆಚ್ಚು ಎನ್ನುವ ಪ್ರಶ್ನೆ ಮೂಡುತ್ತದೆ.

ನಂಜನಗೂಡಿನ ದೇವಸ್ಥಾನದ ಪಕ್ಕದಲ್ಲೇ ಕಪಿಲಾ ನದಿ ಹರಿಯುತ್ತದೆ. ಸ್ವಾಭಾವಿಕವಾಗಿಯೇ ನದಿ ಪಕ್ಕದಲ್ಲಿರುವ ದೇವಸ್ಥಾನಗಳಿಗೆ ಭಕ್ತರು ಹೆಚ್ಚು. ನಂಜನಗೂಡಿನ ಲಿಂಗ ಪ್ರತಿಷ್ಠೆ ಬಹು ಹಿಂದೆ ಋಷಿಗಳಿಂದಾದುದು ಎಂದು ಹೇಳುತ್ತಾರೆ. ಆ ದೇವರು ಸಾವಿರಾರು ಮನೆಗಳ ಮನೆದೇವರಾಗಿದೆ ಒಕ್ಕಲಾಗಿದೆ. ಕಷ್ಟ ಬಂದಾಗಲೆಲ್ಲ ದೇವರಿಗೆ ಹರಕೆ ಹೊರುತ್ತಾರೆ. ಮದುವೆ ಮುಂಜಿ ಮುಂತಾದ ಸಮಾರಂಭಗಳ ಸಮಯದಲ್ಲಿ ದೇವಸ್ಥಾನಕ್ಕೆ ಭೇಟಿ ನೀಡುತ್ತಾರೆ.

ಆದರೆ ಚಾಮರಾಜನಗರ ದೇವಸ್ಥಾನಕ್ಕೆ ದೀರ್ಘ ಚರಿತ್ರೆ ಇಲ್ಲ. ಸುಮಾರು ೨೦೦ ವರ್ಷಗಳ ಹಿಂದೆ ಅರಸರಿಂದ ಸ್ಥಾಪಿತವಾದುದು. ಇದು ಬಹುಶಃ ಕೆಲ ಅರಸರು ಮನೆಗಳನ್ನು ಬಿಟ್ಟರೆ ಬೇರೆ ಯಾರಿಗೂ ಮನೆದೇವರಲ್ಲ. ಇಲ್ಲಿ ಹರಕೆ ಒಪ್ಪಿಸುವವರು ಕಡಿಮೆ. ಇದು ಋಷಿ ಪ್ರತಿಷ್ಠೆ ದೇವರಲ್ಲ. ಅರಸರದು ಎಂಬುದು ಎಂಥ ಪ್ರಬಲ ಐತಿಹ್ಯವೆಂದರೆ ಇದೇ ದೇವಸ್ಥಾನದಲ್ಲಿ ೩೦ ವರ್ಷಗಳ ಕಾಲ ಸೇವಿಸಿದ ಸುಬ್ಬಾವಧಾನಿಗಳು ಎಂಬುವವರ ಒಮ್ಮೆಯೂ ಚಾಮರಾಜೇಶ್ವರನ ತೀರ್ಥವನ್ನು ಸೇವಿಸಿರಲಿಲ್ಲವಂತೆ!

ನಾವು ದೇವರನ್ನು ನಂಬುತ್ತೇವೆಯೋ ಇಲ್ಲವೋ ಎಂಬುದು ಬೇರೆ ಮಾತು. ಆದರೆ ಚಾಮರಾಜನಗರದ ಪ್ರೇಕ್ಷಣೀಯ ಸ್ಥಳದಲ್ಲಿ ಚಾಮರಾಜೇಶ್ವರ ದೇವಸ್ಥಾನ ಪ್ರಮುಖವಾದುದಂರೂ ಹೌದು. ಇದನ್ನು ಸುಂದರವಾಗಿ ಅಚ್ಚುಕಟ್ಟಾಗಿ ಇಟ್ಟು ಕೊಳ್ಳುವ ಹೊಣೆ ನಮ್ಮೆಲ್ಲರ ಮೇಲಿದೆ.

# ಅಧ್ಯಾಯ – ೫

# ಅಂತೂ 'ಶಾಪ' ವಿಮೋಚನೆ– ಈಗೇನಿದ್ದರೂ ಅಭಿವೃದ್ಧಿ 'ಮಂತ್ರ'

ಶಾಪಗ್ರಸ್ಥ ಜಿಲ್ಲೆ ಎಂಬ ಅಪಖ್ಯಾತಿಗೆ ಒಳಗಾಗಿದ್ದ ಚಾಮರಾಜನಗರ ಜಿಲ್ಲೆಯಲ್ಲಿ ಈಗ ಅಭಿವೃದ್ಧಿಯ ಸಂಚಲನ ಶುರುವಾಗಿದೆ.

ಜಿಲ್ಲೆಯಲ್ಲಿ ಅಪಾರ ಪ್ರಮಾಣದ ಪ್ರಕೃತಿ ಸಂಪತ್ತಿದೆ. ಕಪ್ಪು ಶಿಲೆಯಿದೆ, ಸುಂದರ ಪರಿಸರ ತಾಣಗಳಿವೆ. ಪ್ರಸಿದ್ದ ಧಾರ್ಮಿಕ ಕೇಂದ್ರಗಳಿವೆ. ಅಭಿವೃದ್ಧಿಗೆ ವಿಫುಲ ಅವಕಾಶಗಳೂ ಇವೆ.

ಆದರೆ, ಜಿಲ್ಲೆಯಲ್ಲಿ ದಶಕ ಕಳೆದರೂ ಈವರೆಗೆ ಅಭಿವೃದ್ಧಿಯ ಮಾತು ನಿರೀಕ್ಷಿಸಿದಷ್ಟು ಕೇಳಿರಲಿಲ್ಲ. ಅಧಿಕಾರಸ್ಥರ ಅಸಡ್ಡೆ, ಇಲ್ಲಿಗೆ ಬಂದರೆ ಅಧಿಕಾರ ಹೋಗುತ್ತದೆ ಎಂಬ ಜನಪ್ರತಿನಿಧಿಗಳ ಮೂಢನಂಬಿಕೆ. ದಶಕಗಳ ಕಾಲ ಈ ಭಾಗವನ್ನು ದಂತಚೋರ, ಕಾಡುಗಳ್ಳ ವೀರಪ್ಪನ್ ಕಾಡಿದ್ದು... ಇವೇ ಮುಂತಾದ ಕಾರಣಗಳು ಅಭಿವೃದ್ಧಿಯನ್ನು ನಿಂತ ನೀರಾಗಿಸಿತು. ಕೇಂದ್ರದಲ್ಲಿ ವಿ.ಶ್ರೀನಿವಾಸಪ್ರಸಾದ್ ಸಚಿವರಾಗಿದ್ದಾಗ ರಾಜ್ಯದಲ್ಲಿ ರಾಜೂಗೌಡ ಮಂತ್ರಿಯಾಗಿದ್ದರು. ಈ ಕಾಲದಲ್ಲಿ ಜಿಲ್ಲೆಯಲ್ಲಿ 'ಅಭಿವೃದ್ಧಿ ಗಾಳಿ' ಬೀಸಿತಾದರೂ ಪರಿಣಾಮಕಾರಿ ಎನಿಸಲಿಲ್ಲ.

ವೀರಪ್ಪನ್ ಹತ್ಯೆಯ ನಂತರ ಜಿಲ್ಲೆ ಅಕ್ಷರಶಃ 'ನಿಟ್ಟುಸಿರು' ಬಿಟ್ಟಿತಾದರೂ ಅಭಿವೃದ್ಧಿ ವಿಚಾರದಲ್ಲಿ 'ಶಾಪ' ವಿಮೋಚನೆ ಆಗಿರಲಿಲ್ಲ.

ಮೂಲ ಸೌಲಭ್ಯಗಳ ಕೊರತೆ: ಜಿಲ್ಲೆಯಾದರೂ ವಿಜ್ಞಾನ ಪದವಿ, ಎಂಜಿನಿಯರಿಂಗ್, ಮೆಡಿಕಲ್ ಓದಬೇಕೆಂದರೆ ಮೈಸೂರಿಗೆ ಹೋಗುವುದು ಅನಿವಾರ್ಯವಾಗಿತ್ತು.

ಅಗತ್ಯ ಮೂಲಭೂತ ಸೌಲಭ್ಯಗಳ ಕೊರತೆಯೂ ಹೆಚ್ಚಿತ್ತು. ಪ್ರಮುಖವಾಗಿ ಜಿಲ್ಲೆ ಮಟ್ಟದ ಅಧಿಕಾರಿಗಳು ಜಿಲ್ಲಾ ಕೇಂದ್ರದಲ್ಲಿ ತಂಗಲು ಸೂಕ್ತ ವಸತಿ ಇರಲಿಲ್ಲ. ಉತ್ತಮ ವಾತಾವರಣವೂ ಇರಲಿಲ್ಲ. ಈ ಕಾರಣಕ್ಕೆ ಬಹುತೇಕ ಅಧಿಕಾರಿಗಳು ಮೈಸೂರಿನಲ್ಲಿ ಮನೆ ಮಾಡಿ, ಅಲ್ಲಿಂದಲೇ ಬಸ್ ಮತ್ತು ರೈಲುಗಳಲ್ಲಿ ಬಂದು ಹೋಗುವ ಪರಿಪಾಠವಿತ್ತು.

ಮೂರ್‍ನಾಲ್ಕು ವರ್ಷಗಳಿಂದ ಅಭಿವೃದ್ಧಿಯತ್ತ ಜಿಲ್ಲೆ ಮುಖ ಮಾಡಿದೆ. ಲಕ್ಷಾಂತರ ರೂ. ವೆಚ್ಚದಲ್ಲಿ ಸುಸಜ್ಜಿತ ವಸತಿ ಗೃಹಗಳನ್ನು ನಿರ್ಮಿಸಲಾಗಿದೆ. ಎಲ್ಲರೂ ಕೇಂದ್ರ ಸ್ಥಾನದಲ್ಲಿಯೇ ಉಳಿಯುವಂತೆ ಸೂಚಿಸಲಾಗಿದೆ. ಜೊತೆಗೆ, ಸುಸಜ್ಜಿತ ಜಿಲ್ಲಾಡಳಿತ ಭವನ, ಪೊಲೀಸ್ ಕಛೇರಿ, ಕಾರಾಗೃಹ, ಅಗ್ನಿಶಾಮಕ ಠಾಣೆಗಳೂ ನಿರ್ಮಾಣಗೊಂಡಿವೆ.

ಮೈಸೂರು-ಚಾ.ನಗರ ರೈಲ್ವೆ ಮಾರ್ಗ ಬ್ರಾಡ್‌ಗೇಜ್ ಪರಿವರ್ತನೆ ಕೆಲಸ ಭರದಿಂದ ನಡೆದಿದೆ. ನಗರದಲ್ಲಿ ವಿಜ್ಞಾನ ಪದವಿ ಕಾಲೇಜು ಆರಂಭಿಸಲಾಗಿದೆ. ಜಿಲ್ಲಾ ಕ್ರೀಡಾಂಗಣವನ್ನು ೩ ಕೋಟಿ ರೂ.ವೆಚ್ಚದಲ್ಲಿ ನಿರ್ಮಿಸಲಾಗಿದೆ. ೩ ಕೋಟಿ ರೂ. ವೆಚ್ಚದಲ್ಲಿ ಸುಸಜ್ಜಿತ ರಂಗಮಂದಿರ ನಿರ್ಮಾಣಕ್ಕೆ ಚಾಲನೆ ನೀಡಲಾಗಿದೆ.

ಮಲೆ ಮಹದೇಶ್ವರ ಬೆಟ್ಟದಲ್ಲಿ ಜಾನಪದ ಅಧ್ಯಯನ ಕೇಂದ್ರ, ನಗರದಲ್ಲಿ ಎಂಜಿನಿಯರಿಂಗ್ ಕಾಲೇಜು, ಯಡಿಯೂರು ಸಿದ್ದಲಿಂಗೇಶ್ವರರ ಜನ್ಮ ಸ್ಥಳ ಹರದನಹಳ್ಳಿಯ ಅಭಿವೃದ್ಧಿಗೆ ಕಾಲ ಕೂಡಿ ಬಂದಿರುವುದು ಜಿಲ್ಲೆಯ ಜನರ ಅದೃಷ್ಟದ ಬಾಗಿಲು ತೆರೆದಂತೆಯೇ ಸರಿ.

ಮಾಜಿ ಮುಖ್ಯಮಂತ್ರಿ ಹೆಚ್.ಡಿ.ಕುಮಾರಸ್ವಾಮಿ ಅವರು ಚಾ.ನಗರಕ್ಕೆ ಬಂದು ಹೋಗಿದ್ದರಿಂದ ಈ ಮೂಲಕ ಜಿಲ್ಲೆ ಕೇಂದ್ರಕ್ಕೆ ಅಂಟಿದ್ದ ಶಾಪ ವಿಮೋಚನೆಯಾಗಿದೆ. ಜಡ್ಡುಗಟ್ಟಿದ ಆಡಳಿತ ವ್ಯವಸ್ಥೆಗೆ ಎಲ್ಲಿಲ್ಲದ ಚುರುಕು ಬಂದಿದೆ.

ಅಧಿಕಾರಿಗಳು, ಜನಪ್ರತಿನಿಧಿಗಳು ಅಭಿವೃದ್ಧಿ ಕೆಲಸಕ್ಕೆ ಒತ್ತುಕೊಟ್ಟಿದ್ದಾರೆ. ಇದೇ ವೇಗವನ್ನು ಕಾಯ್ದುಕೊಂಡರೆ ಕೆಲವೇ ವರ್ಷಗಳಲ್ಲಿ ಚಾ.ನಗರ ಮುಂದುವರಿದ ಜಿಲ್ಲೆಗಳ ಪಟ್ಟಿಗೆ ಸೇರುವುದರಲ್ಲಿ ಸಂಶಯವಿಲ್ಲ.

ಇಂಥ ಸದಾಶಯಕ್ಕೆ ಶ್ರೀ ಕುಮಾರಸ್ವಾಮಿಯವರ ಭೇಟಿ 'ಮುನ್ನುಡಿ'ಯಾಗಲಿ ಎಂಬುದು ಜಿಲ್ಲೆಯ ಜನರ ಆಶಯ ಮತ್ತು ಕನಸು.

## ೧೦ ವರ್ಷದ 'ನಡೆ'

ಮೈಸೂರು ಜಿಲ್ಲೆಯ ಅವಿಭಾಜ್ಯ ಅಂಗವಾಗಿದ್ದ ಚಾಮರಾಜನಗರ ಪ್ರತ್ಯೇಕ ಜಿಲ್ಲೆಯಾಗಿದ್ದು ೧೯೯೭ರ ಆಗಸ್ಟ್ ೧೫ ರಂದು. ಅಲ್ಲಿಯವರೆಗೂ ತಾಲ್ಲೂಕು ಕೇಂದ್ರವಾಗಿದ್ದ ಚಾ.ನಗರ ಢಿಢೀರನೇ ಜಿಲ್ಲಾ ಕೇಂದ್ರವಾಯಿತು.

ಜಿಲ್ಲೆಯೇನೋ ಆಯಿತು. ಆದರೆ ಅಧಿಕಾರಸ್ಥರ ನಿರ್ಲಕ್ಷ್ಯದಿಂದ ಜಿಲ್ಲಾ ಕೇಂದ್ರಕ್ಕೆ ಬೇಕಾದ ಸೌಲಭ್ಯಗಳು ಮಾತ್ರ ನಿರೀಕ್ಷಿತ ವೇಗದಲ್ಲಿ ಲಭ್ಯವಾಗಲಿಲ್ಲ.

ಆರಂಭದಲ್ಲಿ ಹೆಚ್ಚು ಜನಸಂಖ್ಯೆ ಇರುವ ಕೊಳ್ಳೇಗಾಲವನ್ನು ಜಿಲ್ಲಾ ಕೇಂದ್ರ ಮಾಡಬೇಕು ಎಂಬ ಬೇಡಿಕೆ ಇತ್ತು. ಇದನ್ನು ಸರಿದೂಗಿಸಲು ನಂಜನಗೂಡಿನಲ್ಲಿದ್ದ ಉಪವಿಭಾಗ ಕಛೇರಿಯನ್ನು ಕೊಳ್ಳೇಗಾಲಕ್ಕೆ ಸ್ಥಳಾಂತರಿಸಲಾಯಿತು. ಆಗಲೇ ಆಗಬೇಕಿರುವ ಕೆಲಸಗಳ ಬಗ್ಗೆ ರೂಪುರೇಷೆ ತಯಾರಿಸಲಾಯಿತು. ಆದರೆ ಅದು ಕೈಗೂಡಲಿಲ್ಲ.

**ಜೆ.ಎಚ್.ಪಟೇಲ್**

೧೯೯೭ರಲ್ಲಿ ಮುಖ್ಯಮಂತ್ರಿಯಾಗಿದ್ದ ಜೆ.ಎಚ್.ಪಟೇಲ್ ಅವರು ಗಡಿಭಾಗದಲ್ಲಿರುವ ಚಾ.ನಗರ, ಯಳಂದೂರು, ಕೊಳ್ಳೇಗಾಲ, ಗುಂಡ್ಲುಪೇಟೆ ತಾಲ್ಲೂಕುಗಳನ್ನು ಸೇರಿಸಿ ಚಾಮರಾಜನಗರವನ್ನು ೧.೮.೯೭ರಲ್ಲಿ ಹೊಸ ಜಿಲ್ಲೆ ಎಂದು ಘೋಷಿಸಿದರು.

ಅಲ್ಲಿಯವರೆಗೂ ಎಲ್ಲದಕ್ಕೂ ಮೈಸೂರಿಗೆ ಅಲೆಯಬೇಕಿದ್ದ ಗಡಿಭಾಗದ ಜನರಿಗೆ ಇದು ಸಂತಸದ ಸಂಗತಿಯಾಯಿತು. ಜಿಲ್ಲಾಧಿಕಾರಿ ಕಛೇರಿ, ಉಪ ವಿಭಾಗಾಧಿಕಾರಿ ಕಛೇರಿಗಳು ಹತ್ತಿರಕ್ಕೆ ಬಂದವಾದರೂ, ಅಭಿವೃದ್ಧಿಯಾಗದ ಕಾರಣ ಹೆಚ್ಚಿನ ಸೌಲಭ್ಯಗಳಿಗೆ ಮೈಸೂರನ್ನು ಅವಲಂಬಿಸುವುದು ಮಾತ್ರ ತಪ್ಪಲಿಲ್ಲ.

**ಎಸ್.ಎಂ.ಕೃಷ್ಣ (೧೯೯೯–೨೦೦೪)**

ಎಸ್.ಎಂ.ಕೃಷ್ಣ ಅವರು ಮುಖ್ಯಮಂತ್ರಿಯಾಗಿದ್ದಾಗ ೨೦೦೨ರಲ್ಲಿ ಬಿಳಿಗಿರಿರಂಗನಬೆಟ್ಟದಲ್ಲಿ ಮಿನಿ ಸಚಿವೆ ಸಂಪುಟ ಸಭೆಯನ್ನು ನಡೆಸಿದ್ದರು. ಈ ಮೂಲಕ ಗಿರಿಜನರ ಕಲ್ಯಾಣಕ್ಕೆ ಹಲವಾರು ಯೋಜನೆಗಳನ್ನು ರೂಪಿಸಲಾಯಿತು. ಆದರೆ ಸಭೆಯ ನಿರ್ಣಯಗಳು ಈವರೆಗೂ ಪೂರ್ಣ ಪ್ರಮಾಣದಲ್ಲಿ ಜಾರಿಯಾಗಿಲ್ಲ.

ಜಿಲ್ಲಾ ಕೇಂದ್ರದ ಎಲ್ಲಾ ಸರಕಾರಿ ಕಛೇರಿಗಳು ಖಾಸಗಿ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿದ್ದವು. ಈ ವ್ಯವಸ್ಥೆಗೆ ಮುಕ್ತಿ ಹಾಡಿ, ಸಾರ್ವಜನಿಕರ ಹಿತದೃಷ್ಟಿಯಿಂದ ಎಲ್ಲಾ ಕಛೇರಿಗಳೂ ಒಂದೇ ಕಡೆ ಕೆಲಸ ಮಾಡುವ ರೀತಿಯಲ್ಲಿ ಜಿಲ್ಲಾ ಸಂಕೀರ್ಣ ನಿರ್ಮಿಸಲು ರೂಪುರೇಷೆ ತಯಾರಿಸಲಾಯಿತು.

ನಂತರ ೧೬ ಕೋಟಿ ರೂ. ವೆಚ್ಚದ ಕಟ್ಟಡ ಕಾಮಗಾರಿಗೆ ಚಾಲನೆ ದೊರೆಯಿತು. ಜೊತೆಗೆ, ಸುಮಾರು ೨ ಕೋಟಿ ರೂ. ವೆಚ್ಚದಲ್ಲಿ ಜಿಲ್ಲಾ ಪೊಲೀಸ್ ಕಛೇರಿ ಮತ್ತು ಸುಮಾರು ಒಂದೂವರೆ ಕೋಟಿ ರೂ. ವೆಚ್ಚದಲ್ಲಿ ಸುಸಜ್ಜಿತ ಕಾರಾಗೃಹ ನಿರ್ಮಾಣಕ್ಕೂ ಚಾಲನ ನೀಡಲಾಯಿತು.

**ಧರ್ಮಸಿಂಗ್ (೨೦೦೪-೨೦೦೬)**

ಧರ್ಮಸಿಂಗ್ ಅವರ ಕಾಲದಲ್ಲಿ ಜಿಲ್ಲೆಗೆ ಹೊಸ ಯೋಜನೆಗಳು ಜಾರಿಯಾಗಿದ್ದರೂ ಎಸ್.ಎಂ.ಕೃಷ್ಣ ಅವರ ಅವಧಿಯಲ್ಲಿ ಶಂಕುಸ್ಥಾಪನೆ ಗೊಂಡಿದ್ದ ಜಿಲ್ಲಾಡಳಿತ ಭವನ, ಜಿಲ್ಲಾ ಪೊಲೀಸ್ ಕಛೇರಿ ಹಾಗೂ ಕಾರಾಗೃಹ ಕಟ್ಟಡ ಕಾಮಗಾರಿಗಳು ಪೂರ್ಣಗೊಂಡವು.

ಈ ಕಟ್ಟಡಗಳನ್ನು ಉದ್ಘಾಟಿಸುವ ಭಾಗ್ಯ ಸಿಕ್ಕಿದ್ದು ಆಗ ಉಪಮುಖ್ಯಮಂತ್ರಯಾಗಿದ್ದ ಎಂ.ಪಿ.ಪ್ರಕಾಶ್‌ಗೆ.

**ಹೆಚ್.ಡಿ.ಕುಮಾರಸ್ವಾಮಿ**

ಜಾ.ದಳ-ಬಿ.ಜೆ.ಪಿ ಸಮ್ಮಿಶ್ರ ಸರಕಾರದ ಮುಖ್ಯಮಂತ್ರಿ ಹೆಚ್.ಡಿ.ಕುಮಾರಸ್ವಾಮಿ ಜಿಲ್ಲಾ ಕೇಂದ್ರಕ್ಕೆ ಅಗತ್ಯವಾದ ಎಂಜಿನಿಯರಿಂಗ್ ಕಾಲೇಜು, ಮಲೆ ಮಹದೇಶ್ವರ ಬೆಟ್ಟದಲ್ಲಿ ಜಾನಪದ ಅಧ್ಯಯನ ಕೇಂದ್ರಕ್ಕೆ ಹಸಿರು ನಿಶಾನೆ ತೋರಿಸಿದ್ದಾರೆ. (ಈಗ ಅವು ಪ್ರಾರಂಭಗೊಂಡಿವೆ)

ಮಲೆ ಮಹದೇಶ್ವರ ಬೆಟ್ಟವನ್ನು ಪ್ರವಾಸಿ ತಾಣವಾಗಿ ಮಾಡುವ ಭರವಸೆ ನೀಡಿದ್ದಾರೆ. ಇದಲ್ಲದೆ, ಯಡಿಯೂರು ಸಿದ್ದಲಿಂಗೇಶ್ವರರ ಜನ್ಮ ಸ್ಥಳವಾದ ಹರದನಹಳ್ಳಿಯ ಸಮಗ್ರ ಅಭಿವೃದ್ಧಿ ಮತ್ತು ದೇವಸ್ಥಾನಗಳ ಜೀರ್ಣೋದ್ಧಾರಕ್ಕೆ ೨ ಕೋಟಿ ರೂ. ಬಿಡುಗಡೆ ಮಾಡಿದ್ದಾರೆ. ಇದರಲ್ಲಿ ಜಿಲ್ಲಾ ಉಸ್ತುವಾರಿ ಸಚಿವ ಹೆಚ್.ಎಸ್.ಮಹದೇವಪ್ರಸಾದ್ ಅವರ ಪರಿಶ್ರಮವೂ ಸಾಕಷ್ಟಿದೆ. ಈಗ ನಗರದ 'ಶಾಪ ವಿಮೋಚನೆ'ಯಾಗುವ ಲಕ್ಷಣಗಳು ಕಾಣತೊಡಗಿದೆ.

**ಹದಿನಾರು ವರ್ಷ ಕಾಡಿದ ಮೌಢ್ಯ**

ಗಡಿಭಾಗದ ಚಾ.ನಗರ ಜಿಲ್ಲೆ ಅಭಿವೃದ್ಧಿಯಲ್ಲಿ ಹಿಂದುಳಿದಿದೆಯೇ ಹೊರತು ಸಂಪನ್ಮೂಲದಲ್ಲಲ್ಲ. ಅಧಿಕಾರದ ಆಸೆಗಾಗಿ ಮೂಢನಂಬಿಕೆಗೆ ಕಟ್ಟುಬಿದ್ದ ಮುಖ್ಯಮಂತ್ರಿಗಳು ಇತ್ತ ಸುಳಿಯದಿದ್ದುದು ಇದಕ್ಕೆ ಕಾರಣವೇ ಹೊರತು ಇಲ್ಲಿನ ಮುಗ್ಧ ಜನರಲ್ಲ.

ಮೂಢನಂಬಿಕೆ ಜಿಲ್ಲೆಯನ್ನು ಎಡೆಬಿಡದೆ ಕಾಡಿದ್ದು ಒಂದೆರಡು ವರ್ಷವಲ್ಲ. ಒಟ್ಟು ೧೬ ವರ್ಷ. ಈ ಸುದೀರ್ಘ ಸಮಯದಲ್ಲಿ ಆಗಬೇಕಾದ ಅಭಿವೃದ್ಧಿ ಕೆಲಸಗಳು ಆಗಲೇ ಇಲ್ಲ!

ಪ್ರಕೃತಿ ಸಂಪತ್ತು, ಅರಣ್ಯ, ಪ್ರವಾಸಿ ತಾಣಗಳು ವರ್ಣಿಸಲಸಾಧ್ಯ. ಆದರೆ ಅವನ್ನು ಕಣ್ಣು ತೆರೆದು ನೋಡುವ, ಜಿಲ್ಲೆಯ ಅಭಿವೃದ್ಧಿಗೆ ಬಳಸಿಕೊಳ್ಳುವ ಮನಸ್ಸು ಕಣ್ಣಿದ್ದೂ ಕುರುಡರಂತಿದ್ದ ಅಧಿಕಾರಸ್ಥರಿಗೆ ಇಲ್ಲದೆ ಹೋದದ್ದು ನಾಚಿಕೆಗೇಡಿನ ಸಂಗತಿ.

ಮುಖ್ಯಮಂತ್ರಿಯಾದವರಿಗೆ ರಾಜ್ಯದ ಪ್ರತಿಯೊಂದು ಜಿಲ್ಲೆ, ಪ್ರದೇಶ ಒಂದೇ, ಇದರಲ್ಲಿ ಭೇದಭಾವ ಸಲ್ಲದು. ಆದರೆ ಬಾಯಲ್ಲಿ ವೈಚಾರಿಕತೆ ಮಾತನಾಡುವ ಮುಖ್ಯಮಂತ್ರಿಗಳು ಮತ ಹಾಕಿ ಅಧಿಕಾರ ನೀಡಿದ ಜನರನ್ನೇ ಮೂಢನಂಬಿಕೆ ಹೆಸರಲ್ಲಿ ವಂಚಿಸುತ್ತಾ ಬಂದಿದ್ದು ದುರಂತವಲ್ಲದೆ ಮತ್ತೇನೂ ಅಲ್ಲ.

ಇದರ ಪರಿಣಾಮ ಅಭಿವೃದ್ಧಿಯಲ್ಲಿ ಹಿನ್ನಡೆ, ಅಧಿಕಾರಿಗಳ ಅಟ್ಟಹಾಸ, ಒಟ್ಟಿನಲ್ಲಿ ಇದೆಲ್ಲಾ ಪ್ರಜಾಪ್ರಭುತ್ವ ವ್ಯವಸ್ಥೆಯ ಅಣಕ.

ಕಾರಣವಾದರೂ ಏನು?: ಮುಖ್ಯಮಂತ್ರಿ ಪದವಿಗೂ ಚಾ.ನಗರಕ್ಕೆ ಬಂದರೆ ಅಧಿಕಾರ ಹೋಗುತ್ತದೆ ಎಂಬುದಕ್ಕೂ ಎಲ್ಲಿಂದೆಲ್ಲಿಯು ಸಂಬಂಧ?

ಒಂದೆರಡು ಘಟನೆಗಳು ಕಾಕತಾಳೀಯವಾಗಿ ಸಂಭವಿಸಿದ್ದೇ ಈ ರೀತಿಯ 'ಮೌಢ್ಯ" ಗಟ್ಟಿಯಾಗಿ ಬೇರೂರಲು ಕಾರಣವಾಯಿತು.

ಮುಖ್ಯಮಂತ್ರಿಯಾಗಿದ್ದಾಗ ದೇವರಾಜ ಅರಸು, ಗುಂಡೂರಾವ್, ರಾಮಕೃಷ್ಣ ಹೆಗಡೆ, ನಿಜಲಿಂಗಪ್ಪ ಮುಂತಾದವರು ಚಾ.ನಗರಕ್ಕೆ ಬಂದು ಹೋಗಿದ್ದರು. ಅವರಾರೂ ಆಗ ಅಧಿಕಾರ ಕಳೆದುಕೊಳ್ಳಲಿಲ್ಲ.

ಆದರೆ ೧೯೯೦ರಲ್ಲಿ ವೀರೇಂದ್ರ ಪಾಟೀಲ್ ಅವರು ಕಾವೇರಿ ಕುಡಿಯುವ ನೀರು ಸರಬರಾಜು ಕಾರ್ಯಕ್ರಮ ಉದ್ಘಾಟನೆಗೆ ಬಂದುಹೋದ ಮೇಲೆ ಅಧಿಕಾರ ಕಳೆದುಕೊಂಡರು. ಆಗ ಪ್ರಧಾನಿಯಾದ ರಾಜೀವ್ ಗಾಂಧಿ ಅವರು ಅನಾರೋಗ್ಯದ ಕಾರಣ ವೀರೇಂದ್ರ ಪಾಟೀಲ್ ಅವರನ್ನು ಅಧಿಕಾರದಿಂದ ಕೆಳಗಿಳಿಸಿದರು.

ದುರಂತ ಎಂದರೆ, ಚಾ.ನಗರಕ್ಕೆ ಹೋಗಿದ್ದೇ ಪಾಟೀಲರು ಅಧಿಕಾರ ಕಳೆದುಕೊಳ್ಳಲು ಕಾರಣ ಎಂಬ ವದಂತಿ ಎಲ್ಲೆಡೆ ಹಬ್ಬತೊಡಗಿತು. ೧೯೯೪ರಲ್ಲಿ ಅಧಿಕಾರ ಇಲ್ಲದಿದ್ದಾಗ ಬಂದಿದ್ದ ಹೆಚ್.ಡಿ.ದೇವೇಗೌಡರು ಮುಖ್ಯಮಂತ್ರಿ ಪದವಿ ಏರಿದ

ಮೇಲೆ ಈ ಕಡೆ ಮುಖ ಹಾಕಲಿಲ್ಲ. ಜೆ.ಎಚ್.ಪಟೇಲ್ ಅವರು ೧೯೯೭ರಲ್ಲಿ ಚಾ.ನಗರವನ್ನು ಹೊಸ ಜಿಲ್ಲೆ ಎಂದು ಘೋಷಿಸಿದ್ದು ೧೫೦ ಕಿ.ಮೀ. ದೂರದ ಮಲೆ ಮಹದೇಶ್ವರ ಬೆಟ್ಟದಲ್ಲಿ!

ಎಸ್.ಎಂ.ಕೃಷ್ಣ ಅವರು ಸಿಎಂ ಆದಾಗ ಮಲೆ ಮಹದೇಶ್ವರ ಬೆಟ್ಟಕ್ಕೆ ತಿಂಗಳಿಗೊಮ್ಮೆ ಭೇಟಿಯಿತ್ತರೂ, ಚಾ.ನಗರದತ್ತ ಸುಳಿಯಲಿಲ್ಲ. ಧರ್ಮಸಿಂಗ್ ಅವರು ಬರುವುದಾಗಿ ಹೇಳಿಕೊಂಡರೂ ಬರಲಿಲ್ಲ.

# ಗ್ರಂಥಋಣ

೧. ಮಾಡಿದ್ದುಣ್ಣೋ ಮಹಾರಾಯ – ಎಂ.ಎಸ್.ಪುಟ್ಟಣ (ಕಾದಂಬರಿ)

೨. ರಾಜಾವಳಿ ಕಥೆ – ಮಲೆಯೂರು ದೇವಚಂದ್ರ

೩. ರಾಜಾವಳಿ ಕಥೆ – (ವಿಜಾಪುರ ಸಂಕಿರಣ ಕೃತಿ) ಹಂಪಿ ವಿಶ್ವವಿದ್ಯಾನಿಲಯ

೪. ರೇಷ್ಮೆನಾಡು – ವಿಶೇಷ ಸಂಚಿಕೆ ೧೯೮೮ (೨ನೇ ವಾರ್ಷಿಕ) ಸಂಪಾದಕರು ಸದಾಶಿವ ಗಟ್ಟವಾಡಿಪುರ.

೫. ಮಲೆಯೂರು ಶ್ರೀ ಕನಕಗಿರಿಕ್ಷೇತ್ರ – ಪ.ನಾಗರಾಜಯ್ಯ

೬. ಹೊನ್ನುಹೊಳೆ – ಪ್ರೊ.ಮಲೆಯೂರು ಗುರುಸ್ವಾಮಿ, ಸೋಮಶೇಖರ ಬಿಸಲ್ವಾಡಿ.

೭. ಎಪಿಗ್ರಾಫಿಯ ಕರ್ನಾಟಕ – ಸಂಪುಟ ೩ – ೪

೮. ರಂಗದರ್ಪಣ – (ರಂಗತರಂಗ ೧೫ನೇ ವಾರ್ಷಿಕ ಸಂಚಿಕೆ) ನಾಗೇಶ ಸೋಸ್ಲೆ

೯. ಶಿವತತ್ತ್ವ ಚಿಂತಾಮಣಿ – ಲಕ್ಕಣ್ಣ ದಂಡೇಶ

೧೦. ರಾಜಾವಳಿ ಕಥೆ ಒಂದು ಅಧ್ಯಯನ – ಹರೀಶ್ (ಡಾಕ್ಟರೇಟ್ ಪ್ರಬಂಧ)

## ವಕ್ತೃರುಗಳ ಪರಿಚಯ

ಮೀನಿಗೆ ನೀರಿರುವಂತೆ ಕ್ಷೇತ್ರಕಾರ್ಯಕ್ಕೆ ಮಾಹಿತಿಯನ್ನು ನೀಡುವವರು ಅಷ್ಟೇ ಮುಖ್ಯ. ಈ ಮಾಹಿತಿ ಒದಗಿಸಿಕೊಡುವವರನ್ನು ವಕ್ತೃರುಗಳೆಂದು ಕರೆಯುತ್ತೇವೆ. ಈ ವಕ್ತೃರುಗಳೇ ಈ ನಿಬಂಧಕ್ಕೆ ಜೀವ ತುಂಬಿರುವ ನಿರ್ಮಾತೃಗಳು.

| ಕ್ರ ಸಂ. | ಹೆಸರು | ಸ್ಥಳ | ವಯಸ್ಸು | ಜಾತಿ | ಶಿಕ್ಷಣ | ವೃತ್ತಿ |
|---|---|---|---|---|---|---|
| 1. | ಗಣೇಶ ದೀಕ್ಷಿತ್ | ಚಾಮರಾಜನಗರ | 45 ವರ್ಷ | ಬ್ರಾಹ್ಮಣ | ಎಂ.ಎ. | ಪೂಜಾರಿ |
| 2. | ಸೋಮಶೇಖರ ಬಿಸಲ್ವಾಡಿ | ಬಿಸಲವಾಡಿ | 43 ವರ್ಷ | ಪ.ಜಾ | ಎಂ.ಎ. ಪಿಹೆಚ್.ಡಿ | ಉಪನ್ಯಾಸಕರು |
| 3. | ಅಪ್ಪಾಜಿ | ಚಾಮರಾಜನಗರ | 65 ವರ್ಷ | ಬ್ರಾಹ್ಮಣ | ಪಿಯುಸಿ | ಪೂಜಾರಿ |
| 4. | ನೇತ್ರಾವತಿ ಬಿ. | ಚಾಮರಾಜನಗರ | 25 ವರ್ಷ | ಕುರುಬ | ಎಂ.ಎ. ಬಿಎಡ್ | ಉಪನ್ಯಾಸಕಿ |
| 5. | ಸುಬ್ರಮಣಿ | ಸೋಮವಾರಪೇಟೆ | 39 ವರ್ಷ | ಪ.ಜಾ | ಪಿಯುಸಿ | ಕಾವಲುಗಾರ |
| 6. | ನಾಗಲಕ್ಷ್ಮಿ | ಚಾಮರಾಜನಗರ | 27 ವರ್ಷ | ಬ್ರಾಹ್ಮಣ | ಎಂ.ಎ. ಬಿಎಡ್ | ಸಂಶೋಧಕಿ |
| 7. | ಎಸ್.ಆರ್.ಚಂದ್ರು | ಸಿದ್ದಯ್ಯನಪುರ | 40 ವರ್ಷ | ಪ.ಜಾ | ಎಂ.ಎ. | ಶಿಕ್ಷಕರು |
| 8. | ಶಿವರಾಜು | ರಾಮಸಮುದ್ರ | 35 ವರ್ಷ | ಪ.ಜಾ | ಎಂ.ಎ. | ಸಂಶೋಧಕ |



NANDI KAMBA

ದೇವಾಲಯದ ಮುಂದಿನ ನಂದಿಕಂಬ



ಚಾಮರಾಜೇಶ್ವರ ದೇವಾಲಯ



ಚಾಮರಾಜೇಶ್ವರ ದೇವಾಲಯದಲ್ಲಿರುವ ನಂದಿ ವಿಗ್ರಹ



ಗರ್ಭಗುಡಿಯಲ್ಲಿರುವ ಚಾಮರಾಜೇಶ್ವರ ಲಿಂಗ



ಜಾತ್ರಾ ಉತ್ಸವಮೂರ್ತಿ



ತಾಯಿ ಕೆಂಪನಂಜಮ್ಮನವರ ವಿಗ್ರಹ



ಚಾಮುಂಡೇಶ್ವರಿ ವಿಗ್ರಹ



ಕೆಂಪನಂಜಮ್ಮನವರ ಪಾದ



ಜಾತ್ರೆಗೆ ಸಿದ್ಧಗೊಳ್ಳುತ್ತಿರುವ ರಥ



ಕೆಂಪನಂಜಮ್ಮನವರ ರಥ



ಚಾಮುಂಡೇಶ್ವರಿ, ಚಾಮರಾಜೇಶ್ವರ ಮತ್ತು ಕೆಂಪನಂಜಮ್ಮನವರ ವಿಗ್ರಹ